# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೧೩, ೨೦೧೪ (ಫಾಲ್ಗುಣ ೨೨, ಶಕ ವರ್ಷ ೧೯೩೫)<br>Bangalore, Thursday, March 13, 2014 (Phalguna 22, Shaka Varsha 1935) | ಸಂಚಿಕೆ ೧೧<br>Issue 11 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿ ಆಹಾರ ಧಾನ್ಯಗಳನ್ನು ಎತ್ತುವಳಿ ಹಾಗೂ ವಿತರಣೆ ಮಾಡುವ ಸಗಟು ನಾಮಿನಿದಾರರ ಲಾಭಾಂಶದ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ ರವರ ಪತ್ರ ದಿನಾಂಕ 07-09-2012, 13-08-2013 ಮತ್ತು 07-12-2013 ಹಾಗೂ (ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳು) ಟಿಎಪಿಸಿಎಂಎಸ್‌ಗಳ ಮನವಿಗಳು.

**ಪ್ರಸ್ತಾವನೆ:**

ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ, ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯಕ್ಕೊಳಪಟ್ಟ ಸರ್ಕಾರಿ ಸಂಸ್ಥೆ ಮತ್ತು ಟಿಎಪಿಸಿಎಂಎಸ್ ಈ ಎರಡೂ ಸಂಸ್ಥೆಗಳು ರಾಜ್ಯದ ಸಗಟು ನಾಮಿನಿದಾರರು ಸಗಟು ವ್ಯವಹಾರದ ಶೇ.65 ರಷ್ಟು ಕಾರ್ಯವು ಆಹಾರ ನಿಗಮದ ಜವಾಬ್ದಾರಿಯಾಗಿದ್ದು, ಇನ್ನುಳಿದ ಶೇ. 35 ರಷ್ಟು ಕಾರ್ಯವು ಟಿಎಪಿಸಿಎಂಎಸ್‌ನ ಜವಾಬ್ದಾರಿಯಾಗಿರುತ್ತದೆ. ಆಹಾರ ನಿಗಮವು 191 ಸಗಟು ಮಳಿಗೆಗಳನ್ನು ನಡೆಸುತ್ತಿದ್ದು ಟಿಎಪಿಸಿಎಂಎಸ್ 97 ಸಗಟು ಮಳಿಗೆಗಳನ್ನು ನಡೆಸುತ್ತಿದೆ.

ಸರ್ಕಾರವು 1994 ರಲ್ಲಿ ಎಪಿಎಲ್ ಅಕ್ಕಿಯ ಸಗಟು ಲಾಭಾಂಶ ರೂ. 26/– ಬಿಪಿಎಲ್ ಅಕ್ಕಿ ರೂ. 24/–, ಗೋಧಿ ರೂ. 19/– ರಂತೆ ನಿಗದಿಗೊಳಿಸಿರುತ್ತದೆ. ಭಾರತ ಆಹಾರ ನಿಗಮದಿಂದ ಆಹಾರ ಧಾನ್ಯಗಳ ಸಾಗಾಣಿಕೆಯ ಜವಾಬ್ದಾರಿಯನ್ನು 2004 ರಲ್ಲಿ ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ರವರಿಗೆ ವರ್ಗಾಯಿಸಲಾಯ್ತು. ಸರ್ಕಾರವು ದಿನಾಂಕ 01–09–2004 ರಂದು ಸಗಟು ಲಾಭಾಂಶ ದರವನ್ನು ಕಡಿತಗೊಳಿಸಿ ಎಎವೈ ಅಕ್ಕಿಗೆ ರೂ. 19/–, ಗೋಧಿಗೆ ರೂ. 15/– ಮತ್ತು ಬಿಪಿಎಲ್ ಅಕ್ಕಿ ಮತ್ತು ಗೋಧಿಗೆ ರೂ. 20/– (ಪ್ರತಿ ಕ್ವಿಂಟಾಲ್‌ಗೆ) ರಂತೆ ನಿಗದಿಗೊಳಿಸಿರುತ್ತದೆ. 2004 ರಿಂದ ಇಂದಿನವರೆಗೆ ಸಗಟು ಲಾಭಾಂಶದ ದರ ಪರಿಷ್ಕರಣೆಯಾಗಿರುವುದಿಲ್ಲವಾದ್ದರಿಂದ ರಾಜ್ಯ ಆಹಾರ ನಿಗಮ ಮತ್ತು ವಿಭಿನ್ನ ಟಿಎಪಿಸಿಎಂಎಸ್ ಸಂಸ್ಥೆಗಳು ಸಗಟು ಲಾಭಾಂಶ ದರವನ್ನು ಹೆಚ್ಚಿಸುವಂತೆ ಮತ್ತೆ ಮತ್ತೆ ಕೋರಿಕೆ ಸಲ್ಲಿಸಲಾಗಿದೆಯೆಂದು ತಿಳಿಸಲಾಗಿದೆ. ರಾಜ್ಯ ಆಹಾರ ನಿಗಮವು, ಎಲ್ಲಾ ಆಹಾರ ಧಾನ್ಯಗಳಿಗೂ ಸಮಾನವಾಗಿ ಪ್ರತಿ ಕ್ವಿಂಟಾಲ್‌ಗೆ ರೂ. 35/– ರಂತೆ ಹೆಚ್ಚಿಸಲು ಕೋರಿರುತ್ತದೆ.

"ಅನ್ನಭಾಗ್ಯ ಯೋಜನೆ ಜಾರಿಯಾದ ಬಳಿಕ ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮವು ಹೆಚ್ಚುವರಿ 2.60 ಲಕ್ಷ ಮೆಟ್ರಿಕ್ ಟನ್ ಸಾಮರ್ಥ್ಯದ 202 ಗೋದಾಮುಗಳನ್ನು ಆಹಾರ ಧಾನ್ಯಗಳ ದಾಸ್ತಾನು ಮಾಡುವ ಸಲುವಾಗಿ ಬಾಡಿಗೆಗೆ ಪಡೆದಿದೆ. "ಪಡಿತರ ಖಾತರಿ"ಯು ಫೆಬ್ರವರಿ 2014 ರಿಂದ ಜಾರಿಗೊಳ್ಳಲಿದ್ದು ಸಗಟು ನಾಮಿನಿದಾರರು ಎರಡು ತಿಂಗಳುಗಳ ಆಹಾರ ಧಾನ್ಯಗಳನ್ನು ದಾಸ್ತಾನು ಮಾಡಬೇಕಾಗುತ್ತದೆ. ಈ ಉದ್ದೇಶಕ್ಕಾಗಿ ಹೆಚ್ಚುವರಿ ಗೋದಾಮುಗಳನ್ನು ಬಾಡಿಗೆ ಪಡೆಯುವ ಅಗತ್ಯವಿರುತ್ತದೆ. ಆದ್ದರಿಂದ ಬಲಿಷ್ಠವಾದ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಜಾಲಕ್ಕಾಗಿ ಸಗಟು ನಾಮಿನಿಯ ಲಾಭಾಂಶವನ್ನು ಹೆಚ್ಚಿಸುವುದು ಅಗತ್ಯವಾಗಿದೆಯೆಂದು ಕಂಡುಬಂದಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 29 ಡಿಆರ್‌ಎ 2010, ಬೆಂಗಳೂರು, ದಿನಾಂಕ : 16ನೇ ಜನವರಿ 2014**

ಅ) ಸಗಟು ನಾಮಿನಿದಾರರ ಲಾಭಾಂಶ ದರಗಳನ್ನು ಅಕ್ಕಿ ಮತ್ತು ಗೋಧಿಗೆ ಪ್ರತಿ ಕ್ವಿಂಟಾಲ್‌ಗೆ ರೂ. 20/– ಹಾಗೂ ರೂ. 15/– ರಿಂದ ಪ್ರತಿ ಕ್ವಿಂಟಾಲ್ ಅಕ್ಕಿ ಮತ್ತು ಗೋಧಿಗೆ ಸರಿಸಮನಾಗಿ ರೂ. 35/– ಕ್ಕೆ ಹೆಚ್ಚಿಸಿದೆ. ಸಗಟು ಲಾಭಾಂಶ ದರ ಪ್ರತಿ ಕ್ವಿಂಟಾಲ್‌ಗೆ ರೂ. 35/– ರಂತೆ ಸಕ್ಕರೆ ಹಾಗೂ ಇನ್ನಿತರೆ ಪಡಿತರ ಧಾನ್ಯಗಳಿಗೂ ಅನ್ವಯವಾಗುತ್ತದೆ.

ಆ) ಈ ಪರಿಷ್ಕೃತ ಹೆಚ್ಚಿನ ದರಗಳನ್ನು "ಅನ್ನಭಾಗ್ಯ" ಯೋಜನೆ ಜಾರಿಯಾದ ಮಾಹೆ ಜುಲೈ 2013 ರಿಂದ ಪೂರ್ವಾನ್ವಯವಾಗಿ ಜಾರಿಗೊಳಿಸಿದೆ.

ಇ) ಲಾಭಾಂಶ ದರದಲ್ಲಿ ಉಂಟಾಗುವ ಹೆಚ್ಚುವರಿ ವೆಚ್ಚವನ್ನು 2013–14 ನೇ ಸಾಲಿನ ಇಲಾಖೆಯ ಸಬ್ಸಿಡಿ ಹಣದಿಂದ ಭರಿಸತಕ್ಕದ್ದು.

ಈ) ಇನ್ನು ಮುಂದೆ ಎಲ್ಲಾ ನೂತನ ಸಗಟು ಮಳಿಗೆಗಳು ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ ಸಂಸ್ಥೆಯಿಂದ ಮಾತ್ರ ಕಾರ್ಯನಿರ್ವಹಿಸುವಂತೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

PR. 103
SC. 200

## ಸಹಕಾರ ಸಚಿವಾಲಯ

**ವಿಷಯ:** 2013–14ನೇ ಸಾಲಿನ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ (ಷೇರು ಬಂಡವಾಳ ರೂಪದಲ್ಲಿ) ಸರ್ಕಾರದ ಮಂಜೂರಾತಿಗಾಗಿ ಸಲ್ಲಿಸಿರುವ ಪ್ರಸ್ತಾವನೆ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ಅಪರ ನಿಬಂಧಕರ (ಬಳಕೆ ಮತ್ತು ಮಾರಾಟ) ಪತ್ರ ಸಂಖ್ಯೆ : ಆರ್‌ಸಿಎಸ್/ ಎಂಕೆಟಿ–2/7/2013–14, ದಿನಾಂಕ 11–7–2013, ದಿನಾಂಕ 17–8–2013 ಹಾಗೂ ದಿನಾಂಕ 22.11.2013.

2) ಸರ್ಕಾರದ ಆದೇಶ ಸಂಖ್ಯೆ : ಸಇ 73 ಸಂಮಾಸ 2013, ದಿನಾಂಕ 22–08–2013.

3) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ–1 ಟಿಎಫ್‌ಪಿ 2013, ದಿನಾಂಕ 16–11–2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ದಿನಾಂಕ 11–07–2013 ರಂದು ಹಾಗೂ 17–08–2013ರ ಪತ್ರಗಳಲ್ಲಿ ಕೋರಲಾದ ಪ್ರಸ್ತಾವೆಯನ್ನು ಪರಿಶೀಲಿಸಿ, 2013–14ನೇ ಸಾಲಿಗೆ ಸಹಕಾರ ಇಲಾಖೆಯ ಮುಂದುವರೆದ ಯೋಜನೆಯಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ (ಷೇರು ಬಂಡವಾಳ ರೂಪದಲ್ಲಿ) ರೂ. 40.00 ಲಕ್ಷಗಳ ಅನುದಾನ ಆಯವ್ಯಯದಲ್ಲಿ ಲಭ್ಯವಿದ್ದು, ಈ ಪೈಕಿ ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ 22–08–2013ರ ಮೂಲಕ ರೂ. 20.00 ಲಕ್ಷಗಳನ್ನು ಮೊದಲನೇ ಹಾಗೂ ಎರಡನೇ ಕಂತಾಗಿ ನಾಲ್ಕು ಅರ್ಹ **ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ** ಬಿಡುಗಡೆಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ದಿನಾಂಕ 22–11–2013ರ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ಪ್ರಸ್ತಾವನೆ ಪರಿಶೀಲಿಸಿ, ಮೂರನೇ ಕಂತಿನ ಹಣವನ್ನು ನಾಲ್ಕು ಅರ್ಹ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ ತಲಾ ರೂ. 2.50 ಲಕ್ಷಗಳಂತೆ ಒಟ್ಟು ರೂ.10.00 ಲಕ್ಷಗಳನ್ನು ಬಿಡುಗಡೆ ಮಾಡಲು ದಿನಾಂಕ 16–11–2013ರ ಆರ್ಥಿಕ ಇಲಾಖೆ ಆದೇಶದಂತೆ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇ.75 ರಷ್ಟನ್ನು ಬಿಡುಗಡೆ ಮಾಡಲು ಅವಕಾಶವಿರುತ್ತದೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 73 ಸಂಮಾಸ 2013, ಬೆಂಗಳೂರು, ದಿನಾಂಕ : 21–12–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2013–14ನೇ ಸಾಲಿನ ಆಯ–ವ್ಯಯದಲ್ಲಿ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ (ಷೇರು ಬಂಡವಾಳ ರೂಪದಲ್ಲಿ) ಯೋಜನೆಯಡಿ ನಾಲ್ಕು ಅರ್ಹ **ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ** ಮೂರನೇ ಕಂತಾಗಿ ತಲಾ **ರೂ. 2.50 ಲಕ್ಷ** ರೂಪಾಯಿಗಳಂತೆ ಒಟ್ಟು **ರೂ. 10.00 (ಹತ್ತು ಲಕ್ಷ ರೂಪಾಯಿಗಳು ಮಾತ್ರ)** ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ವೆಚ್ಚವನ್ನು 2013–14ನೇ ಸಾಲಿನ ಆಯ–ವ್ಯಯದ ಲೆಕ್ಕ ಶೀರ್ಷಿಕೆ 4425–00–108–0–57–100" ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರ (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ

ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2013, ದಿನಾಂಕ 16-11-2013 ರನ್ವಯ ಸರ್ಕಾರದ ಕಾರ್ಯದರ್ಶಿ ರವರಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಸ್. ನಾಗರಾಜಯ್ಯ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

PR. 129
SC. 100

## ಸಹಕಾರ ಸಚಿವಾಲಯ

**ವಿಷಯ:** ಸಹಕಾರ ಇಲಾಖೆಯ ಕಛೇರಿ ಕಟ್ಟಡಗಳ ನಿರ್ಮಾಣ ಯೋಜನೆ ಅಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ : ಸಿಒ 197 ಸಿಎಲ್‌ಎಂ 2012, ದಿನಾಂಕ 15-01-2013.
2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ-2/07/2012-13, ದಿನಾಂಕ 21-10-2012.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ 2012-13ನೇ ಸಾಲಿನ ಇಲಾಖೆಯ ಕಛೇರಿ ಕಟ್ಟಡಗಳ ನಿರ್ಮಾಣಕ್ಕಾಗಿ ಲೆಕ್ಕ ಶೀರ್ಷಿಕೆ 386-ನಿರ್ಮಾಣ-4425-00-107-0-11 (ಯೋಜನೆ) ಅಡಿಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕುಮಟಾ ಉಪ ವಿಭಾಗ, ಕುಮಟಾ ಈ ಕಛೇರಿಗಳ ಕಟ್ಟಡ ನಿರ್ಮಾಣಕ್ಕೆ ತಲಾ ರೂ. 25.00 ಲಕ್ಷ ರೂಪಾಯಿಗಳಂತೆ ಒಟ್ಟು ರೂ. 50.00 ಲಕ್ಷಗಳನ್ನು ಕೆಲವು ಷರತ್ತುಗಳಿಗೊಳಪಟ್ಟು ಬಿಡುಗಡೆಗೊಳಿಸಿ ಆದೇಶಿಸಿದೆ.

ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (2)ರ ಪ್ರಸ್ತಾವದಲ್ಲಿ 2012-13ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸಲಾಗಿರುವ ರೂ.50.00 ಲಕ್ಷಗಳ ಪೈಕಿ ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕುಮಟಾ ಉಪ ವಿಭಾಗ, ಕುಮಟಾ ಈ ಎರಡು ಕಛೇರಿಗಳ ಕಟ್ಟಡ ನಿರ್ಮಾಣಕ್ಕೆ ತಲಾ ರೂ. 25.00 ಲಕ್ಷಗಳನ್ನು ಸರ್ಕಾರ ಬಿಡುಗಡೆಗೊಳಿಸಲಾಗಿದ್ದು, ಎರಡೂ ಕಛೇರಿ ಕಟ್ಟಡಗಳ ಕಾಮಗಾರಿ ಪ್ರಗತಿಯಲ್ಲಿರುತ್ತವೆ ಎಂದು ತಿಳಿಸಿರುತ್ತಾರೆ.

ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿಯ ಕಟ್ಟಡದ ಮೊದಲನೇ ಅಂತಸ್ತಿನ ಸೆಂಟ್ರಿಂಗ್ ಕೆಲಸ ಪ್ರಾರಂಭವಾಗಿದ್ದು, ಕಾಂಕ್ರಿಟ್ ಫ್ಲೋರಿಂಗ್ ಕೆಲಸ ಪ್ರಾರಂಭವಾಗಲಿದೆ ಎಂದು ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ರವರು ಸಹಕಾರ ಸಂಘಗಳ ನಿಬಂಧಕರಿಗೆ ವರದಿಸಿದ್ದು, ನಿರ್ಮಿತಿ ಕೇಂದ್ರ, ಚಿಕ್ಕಮಗಳೂರು ರವರು ಸದರಿ ಕಾಮಗಾರಿಗೆ ಖರ್ಚಾಗಿರುವ ರೂ.25.00 ಲಕ್ಷಗಳಿಗೆ ಬಳಕೆ ಪ್ರಮಾಣಪತ್ರ ಸಲ್ಲಿಸಿರುವುದಾಗಿ ತಿಳಿಸಿದ್ದು, ಉಳಿದ ಮೊತ್ತ ಬಿಡುಗಡೆಗೊಳಿಸುವಂತೆ ಸಹಕಾರ ಸಂಘಗಳ ನಿಬಂಧಕರನ್ನು ಕೋರಿರುತ್ತಾರೆ.

ಕುಮಟಾ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯ ಕಟ್ಟಡದ ಕೆಲಸ ಲಿಂಟಲ್ ಮಟ್ಟದವರೆಗೆ ಮುಗಿದಿರುತ್ತದೆ ಎಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕುಮಟಾ ಉಪ ವಿಭಾಗ, ಕುಮಟಾ ರವರು ತಿಳಿಸಿರುತ್ತಾರೆಂದು ಹಾಗೂ ಕಛೇರಿ ಕಟ್ಟಡಗಳ ನಿರ್ಮಾಣದ ಪ್ರಗತಿಯನ್ನು ಪರಿಗಣಿಸಿ, 2013-14ನೇ ಸಾಲಿನ ಅನುದಾನದ ಮೊತ್ತ ರೂ. 50.00 ಲಕ್ಷಗಳನ್ನು ಬಿಡುಗಡೆಗೊಳಿಸುವಂತೆ ಸಂಘಗಳ ಸಹಾಯಕ ನಿಬಂಧಕರು ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಸರ್ಕಾರದ ಆದೇಶ ಸಂಖ್ಯೆ : ಸಿಒ 141 ಸಿಎಲ್‌ಎಂ 2013, ಬೆಂಗಳೂರು, ದಿನಾಂಕ : 19-12-2013

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2013-14ನೇ ಸಾಲಿನ ಆಯವ್ಯಯದಲ್ಲಿ 'ಸಹಕಾರ ಇಲಾಖೆಯ ಕಛೇರಿ ಕಟ್ಟಡಗಳ ನಿರ್ಮಾಣ 'ಲೆಕ್ಕ ಶೀರ್ಷಿಕೆ 386-ನಿರ್ಮಾಣ-4425-00-107-0-11 (ಯೋಜನೆ) ಅಡಿಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕುಮಟಾ ಉಪ ವಿಭಾಗ, ಕುಮಟಾ ಈ ಎರಡು ಕಛೇರಿಗಳ ಕಟ್ಟಡ ನಿರ್ಮಾಣಕ್ಕೆ ಒಟ್ಟು ರೂ. 37.50 (ಮೂವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಕೇಂದ್ರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಹಾಗೂ ಡ್ರಾ ಮಾಡಿದ ಹಣವನ್ನು ಸಹಕಾರ ಸಂಘಗಳ ನಿಬಂಧಕರು ಸಂಬಂಧಿಸಿದ ನಿರ್ಮಿತಿ ಕೇಂದ್ರಗಳಿಗೆ ಬಿಡುಗಡೆ ಮಾಡಲು ಅಧಿಕಾರ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013, ದಿನಾಂಕ 10-05-2013ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಸ್. ನಾಗರಾಜಯ್ಯ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 130**
**SC. 50**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ

### ಸಂ: ಲೋಇ 20 ಪಿಡಬ್ಲ್ಯುಸಿ 2013, ಬೆಂಗಳೂರು, ದಿನಾಂಕ 26-10-2013

ಸರ್ಕಾರದ ಆದೇಶ ಸಂಖ್ಯೆ : ಲೋಇ 19 ಪಿಡಬ್ಲ್ಯುಸಿ 2003 ದಿನಾಂಕ 21-08-2013ರ ಆದೇಶ ಭಾಗದಲ್ಲಿ "ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು" ಎಂಬ ಪದವನ್ನು ಕೈಬಿಡಲಾಗಿದೆ. "ಸದರಿ ನೌಕರರು ಸತತ 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿ ಸಕ್ರಮಗೊಂಡ ದಿನಾಂಕದಿಂದ ಅಂದರೆ ದಿನಾಂಕ 11-10-2000 ರಿಂದಲೇ ಸೇವಾ ಹಿರಿತನ ಹಾಗೂ ಆರ್ಥಿಕ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆಂದು" ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮರಿಯಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ.
(ಸೇವೆಗಳು-ಸಿ)

**PR. 142**

## ಆರ್ಥಿಕ ಸಚಿವಾಲಯ

**ವಿಷಯ :** ದಿನಾಂಕ : 31-3-2010ಕ್ಕೂ ಮುಂಚಿತವಾಗಿ ಎನ್.ಪಿ.ಎಸ್. ನೌಕರರ ವೇತನದಿಂದ ಕಟಾವಣೆ ಮಾಡಲಾಗಿರುವ ಎನ್.ಪಿ.ಎಸ್ ಮೊತ್ತವನ್ನು ಹಿಂದಿರುಗಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ ಸ್ಪೆಷಲ್ 04 ಪಿ.ಇ.ಟಿ. 2005, ದಿನಾಂಕ : 31-03-2006.
2. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 79 ಟಿಎಆರ್ 2006, ದಿನಾಂಕ : 16-06-2007.
3. ಸರ್ಕಾರದ ಸುತ್ತೋಲೆ ಸಂಖ್ಯೆ : ಆಇ 79 ಟಿಎಆರ್ 2006, ದಿನಾಂಕ : 06-09-2007.
4. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ (ಎಸ್.ಪಿ.ಎಲ್) 28 ಪಿಇಎಸ್ 2009, ದಿನಾಂಕ : 19-01-2010.
5. ಖಜಾನೆ ಇಲಾಖೆಯ ನಿರ್ದೇಶಕರ ಪತ್ರಗಳ ಸಂಖ್ಯೆ : ಖನಿ/ಎಸ್.ಪಿ.ಎಸ್/59-10-11, ದಿನಾಂಕ : 1-7-2011, 19-08-2011 ಮತ್ತು 6-7-2012.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಿನಾಂಕ : 1-4-2006ರಂದು ಅಥವಾ ಆ ತರುವಾಯ ಸರ್ಕಾರಿ ಸೇವೆಗೆ ಸೇರಿಕೊಳ್ಳುವ ನೌಕರರಿಗಾಗಿ ನೂತನ ಪಿಂಚಣಿ ಪದ್ಧತಿ ಯೋಜನೆ (ಎನ್.ಪಿ.ಎಸ್.) ಎಂದು ಕರೆಯಲಾಗುವ ಒಂದು ನಿಗದಿತ ವಂತಿಗೆ ಪಿಂಚಣಿ ಯೋಜನೆಗೆ ಅನುಮೋದನೆ ನೀಡಿದೆ.

2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎನ್.ಪಿ.ಎಸ್.ನ ಹಂತ-1ರ ಕೊಡುಗೆಯಾದ ದಿನಾಂಕ : 01-04-2006ರಂದು ಹಾಗೂ ತದನಂತರ ಸರ್ಕಾರಿ ಸೇವೆಗೆ ಸೇರಿರುವ ನೌಕರರ ವೇತನದಿಂದ 2007ರ ಜುಲೈ ತಿಂಗಳಿನ ವೇತನ ಬಿಲ್ಲುಗಳಿಂದ ಪ್ರಾರಂಭಿಸಿ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ಎನ್.ಪಿ.ಎಸ್. ನೌಕರರ ವಂತಿಗೆಯನ್ನು ಕಟಾವಣೆ ಮಾಡುವಂತೆ ಆದೇಶಿಸಲಾಗಿರುತ್ತದೆ. ಹಾಗೆಯೇ ಸರ್ಕಾರಿ ನೌಕರರ ವಂತಿಗೆಯನ್ನು ಠೇವಣಿ ಖಾತೆ ಲೆಕ್ಕಶೀರ್ಷಿಕೆ "8342-00-120-2-01" ಇದರಲ್ಲಿ ಜಮೆ ಮಾಡಲು ಸೂಚಿಸಲಾಗಿರುತ್ತದೆ.

3. ಮೇಲೆ (3)ರಲ್ಲಿ ಓದಲಾದ ದಿನಾಂಕ : 06-09-2007ರ ಸುತ್ತೋಲೆಯಲ್ಲಿ ಮುಂದಿನ ಆದೇಶದವರೆಗೆ ಎನ್.ಪಿ.ಎಸ್. ಹಂತ 1ರ ಸಲುವಾಗಿ ವಂತಿಗೆಯನ್ನು ಕಟಾವಣೆ ಮಾಡದಿರುವಂತೆ ಸೂಚಿಸಲಾಗಿರುತ್ತದೆ.

4. ಪುನಃ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಿನಾಂಕ : 01-04-2006 ರಂದು ಹಾಗೂ ತದನಂತರ ಸರ್ಕಾರಿ ಸೇವೆಗೆ ಸೇರಿಕೊಳ್ಳುವ ಸರ್ಕಾರಿ ನೌಕರರ ವಂತಿಗೆ ಪಿಂಚಣಿ ಯೋಜನೆಯನ್ನು ದಿನಾಂಕ : 01-04-2010 ರಿಂದ ಕಾರ್ಯಾರಂಭ ಮಾಡಲು ಆದೇಶಿಸಲಾಗಿದ್ದು, ಸರ್ಕಾರಿ ನೌಕರರ ವಂತಿಗೆಯನ್ನು ಏಪ್ರಿಲ್ 2010ರಲ್ಲಿ ಪಾವತಿಸಲಾಗುವ ಮಾರ್ಚ್ 2010ರ ವೇತನದಿಂದ ಪ್ರಾರಂಭಿಸಲು ಸೂಚಿಸಲಾಗಿರುತ್ತದೆ.

5. ಮೇಲೆ (5)ರಲ್ಲಿ ಓದಲಾದ ಪತ್ರಗಳಲ್ಲಿ ಖಜಾನೆ ನಿರ್ದೇಶಕರು ದಿನಾಂಕ : 16-06-2007ರ ಆದೇಶದ ಸೂಚನೆಗಳಂತೆ ಎನ್.ಪಿ.ಎಸ್. ಹಂತ-1ರ ಕೊಡುಗೆಯಾಗಿ ಕೆಲವು ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗಳು 2007ರ ಜುಲೈ-ಆಗಸ್ಟ್ ತಿಂಗಳ ವೇತನ ಬಿಲ್ಲುಗಳಲ್ಲಿರುವಂತೆ

ಎನ್.ಪಿ.ಎಸ್. ನೌಕರರ ವಂತಿಗೆಯನ್ನು ಕಟಾವಣೆ ಮಾಡಿ ಖಜಾನೆಗಳಿಗೆ ಬಿಲ್ಲುಗಳನ್ನು ಸಲ್ಲಿಸಿರುವುದು ಕಂಡು ಬಂದಿರುತ್ತದೆಂದು ಹಾಗೂ ಈ ವಂತಿಗೆಗಳನ್ನು ಖಜಾನೆಗಳ ಲೆಕ್ಕಶೀರ್ಷಿಕೆ "8342–ಸಾರ್ವಜನಿಕ ಲೆಕ್ಕ ನಿಧಿಯಲ್ಲಿ ಇಡಲಾಗಿದೆಯೆಂದು ತಿಳಿಸಿದ್ದಾರೆ ಹಾಗೂ ಕೆಲವು ಡಿ.ಡಿ.ಓ.ಗಳು ಇತರೆ ರಾಜಸ್ವ ಸ್ವೀಕೃತಿಗಳ ಲೆಕ್ಕಶೀರ್ಷಿಕೆಗೆ ಜಮೆ ಮಾಡಿರುವುದಾಗಿ ತಿಳಿಸಿರುತ್ತಾರೆ. 8342 ಲೆಕ್ಕಶೀರ್ಷಿಕೆಯು ಠೇವಣಿ ಖಾತೆಗೆ ಸಂಬಂಧಿಸಿದ್ದು, ಠೇವಣಿ ಖಾತೆಯ ಆಡಳಿತಗಾರರು ಚೆಕ್ಕಿನ ಮೂಲಕ ಮೊತ್ತವನ್ನು ಹಿಂಪಡೆಯಬೇಕಾಗಿರುತ್ತದೆ. ಆದರೆ ಈ ರೀತಿ ಜಮೆ ಮಾಡಿರುವ ಪ್ರತಿಯೊಂದು ಡಿ.ಡಿ.ಓಗಳಿಗೆ ಚೆಕ್ಕು ಪುಸ್ತಕಗಳನ್ನು ನೀಡುವುದು ಪ್ರಾಯೋಗಿಕವಾಗಿ ಕಷ್ಟವಾಗುವುದರಿಂದ ಸರ್ಕಾರವು ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಏಕಕಾಲಿಕ ಕ್ರಮವಾಗಿ, ಪೇಯೀಸ್ ರಸೀದಿ ಮೂಲಕ ಸೆಳೆಯುವ ಆದೇಶವನ್ನು ನೀಡಲು ಕೋರಿರುತ್ತಾರೆ. ಹಾಗೆಯೇ ವಿವಿಧ ಇಲಾಖೆಯ ರಾಜಸ್ವ ಲೆಕ್ಕಶೀರ್ಷಿಕೆಗೆ ಜಮೆಯಾಗಿರುವ ಮೊತ್ತವನ್ನು ಮರುಪಾವತಿ ಮಾಡಲು ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗಳು ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 142ರ ಪ್ರಕಾರ ಕ್ರಮಕೈಗೊಳ್ಳುವ ಬಗ್ಗೆ ಮತ್ತು ನೌಕರರ ವೇತನದಲ್ಲಿ N.P.S. contribution ಸೆಳೆಯದೇ ಇರುವ ಪ್ರಕರಣಗಳಲ್ಲಿ ವ್ಯತ್ಯಾಸದ ಮೊತ್ತವನ್ನು ಸೆಳೆದು ನೌಕರರಿಗೆ ಪಾವತಿಸುವ ಬಗ್ಗೆ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

6. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 50 ಟಿಎಆರ್ 2013, ಬೆಂಗಳೂರು, ದಿನಾಂಕ : 03–09–2013.**

ನೂತನ ಪಿಂಚಣಿ ಪದ್ಧತಿ ಯೋಜನೆಯಲ್ಲಿ (ಎನ್.ಪಿ.ಎಸ್) ದಿನಾಂಕ : 1–4–2010 ರಿಂದ ವಂತಿಗೆ ಪಾವತಿ ಪ್ರಾರಂಭವಾಗುವ ಮುಂಚಿತವಾಗಿ ಜುಲೈ 2007 ಮತ್ತು ಆಗಸ್ಟ್ 2007 ತಿಂಗಳಿನ ವೇತನ ಬಿಲ್ಲುಗಳಲ್ಲಿ ಎನ್.ಪಿ.ಎಸ್. ನೌಕರರ ವೇತನದಲ್ಲಿ ಕಟಾವಣೆ ಮಾಡಿದ ಎನ್.ಪಿ.ಎಸ್. ವಂತಿಗೆಗಳನ್ನು ಲೆಕ್ಕಶೀರ್ಷಿಕೆ "8342–ಸಾರ್ವಜನಿಕ ಲೆಕ್ಕ ನಿಧಿ" ಯಲ್ಲಿ ಇಟ್ಟಿರುವ ಮೊತ್ತವನ್ನು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು (DDO) "ಪೇಯಿಸ್ ರಸೀದಿ" ಮೂಲಕ ಖಜಾನೆಯಿಂದ ಹಣ ಸೆಳೆಯಲು ಮಂಜೂರಾತಿ ನೀಡಿರುತ್ತದೆ.

ಲೆಕ್ಕ ಶೀರ್ಷಿಕೆ 8342 ಅಥವಾ ಇಲಾಖಾ ರಾಜಸ್ವ ಲೆಕ್ಕ ಶೀರ್ಷಿಕೆಗೆ ಜಮೆಯಾಗಿರುವ ಮೊತ್ತದ ಸಂಬಂಧ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳು (DDO) ನೌಕರರ ಕಟಾವಣೆ ವಿವರಗಳನ್ನು ಎನ್.ಪಿ.ಎಸ್. ಘಟಕಕ್ಕೆ ನೀಡುವುದು, ಡಿ.ಡಿ.ಓ. ಗಳಿಂದ ಬಂದ ವಿವರಗಳನ್ನು ಎನ್.ಪಿ.ಎಸ್. ಘಟಕದಲ್ಲಿ ಎನ್.ಎಂ.ಸಿ. ಯಿಂದ ಪಡೆದಿರುವ ವಿವರಗಳೊಂದಿಗೆ ಸಮನ್ವಯ ಮಾಡಿಕೊಂಡು ಎನ್.ಪಿ.ಎಸ್. ಘಟಕದಿಂದ ಪ್ರತಿ ಡಿ.ಡಿ.ಓ.ಗೆ ಲೆಕ್ಕ ಸಮನ್ವಯ ತಃಖ್ತೆಯನ್ನು ನೀಡುವುದು.

ಲೆಕ್ಕ ಸಮನ್ವಯ ತಃಖ್ತೆಯನ್ನು ಎನ್.ಪಿ.ಎಸ್. ಘಟಕದಲ್ಲಿ ಪಡೆದುಕೊಂಡನಂತರ ಲೆಕ್ಕ ಸಮನ್ವಯಗೊಳಿಸಿರುವುದನ್ನು ಡಿ.ಡಿ.ಓ.ಗಳು ಖಚಿತಪಡಿಸಿಕೊಂಡು ದೃಢೀಕರಿಸುವುದು. "8342" ಲೆಕ್ಕಶೀರ್ಷಿಕೆಗೆ ಜಮೆಯಾಗಿರುವ ಮೊತ್ತವನ್ನು ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗಳು "ಪೇಯೀಸ್ ರಸೀದಿ"ಯ ಮೇಲೆ ಸೆಳೆಯಬಹುದಾಗಿದೆ. ಈ "ಪೇಯೀಸ್ ರಸೀದಿ" ಯಲ್ಲಿ ಯಾವ ಯಾವ ನೌಕರರಿಗೆ ಎಷ್ಟು ಮೊತ್ತವನ್ನು ಪಾವತಿಸಬೇಕು ಎಂಬ ಬಗ್ಗೆ "ಅನುಬಂಧ" ವನ್ನು ಲಗತ್ತಿಸಿ ಆಯಾ ನೌಕರರ ಹೆಸರುಗಳಿಗೆ ಚೆಕ್ಕುಗಳನ್ನು ಪಡೆದು ವಿತರಿಸುವುದು ಜಮೆ ಮಾಡಿರುವ ಮೊತ್ತದಲ್ಲಿ ಆಯಾ ನೌಕರರಿಗೆ ಸರಿಯಾದ ಮೊತ್ತವನ್ನು ಪಾವತಿಸುವುದು ಸಂಬಂಧಿಸಿದ ಡಿ.ಡಿ.ಓ.ಗಳ ಜವಾಬ್ದಾರಿಯಾಗಿರುತ್ತದೆ.

ಎನ್.ಪಿ.ಎಸ್. ಸಂಬಂಧವಾಗಿ ರಾಜಸ್ವ ಲೆಕ್ಕ ಶೀರ್ಷಿಕೆಯಡಿಯಲ್ಲಿ ಜಮೆಯಾಗಿರುವ ಮೊತ್ತಗಳನ್ನು ಡಿ.ಡಿ.ಓ.ಗಳು ಕರ್ನಾಟಕ ಆರ್ಥಿಕ ಸಂಹಿತೆ 142ರ ಪ್ರಕಾರ ಮತ್ತು ಸರ್ಕಾರದ ಆದೇಶ ಸಂಖ್ಯೆ : ಆಇ 2 ಟಿಎಫ್‌ಪಿ 2010, ದಿನಾಂಕ : 30–04–2010ರಲ್ಲಿನ ಕ್ರಮ ಸಂಖ್ಯೆ 26ರಲ್ಲಿ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ನೀಡಿರುವ ಅಧಿಕಾರದಲ್ಲಿ ಸಂಬಂಧಪಟ್ಟ ನೌಕರರಿಗೆ ಮರುಪಾವತಿಸುವ ಕ್ರಮ ತೆಗೆದುಕೊಳ್ಳುವುದು.

ನೌಕರರ ವೇತನದಲ್ಲಿ NPS contribution amount ಆದ ಶೇಕಡ 10 ಮೂಲ ವೇತನ + ತುಟ್ಟಿ ಭತ್ಯೆವನ್ನು ವೇತನದಲ್ಲಿ ಸೆಳೆಯದೆ (shortdrawn) ಇರುವ ಪ್ರಕರಣಗಳ ವ್ಯತ್ಯಾಸ ಮೊತ್ತವನ್ನು ಡಿ.ಡಿ.ಓಗಳು ಸೆಳೆದು ನೌಕರರಿಗೆ ಪಾವತಿಸಲು ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 140**

**ಸಿ. ಶಾಮರಾವ್**

ಸರ್ಕಾರದ ಜಂಟಿ ಕಾರ್ಯದರ್ಶಿ,

(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)

ಆರ್ಥಿಕ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : (1) ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ, (2) ಶ್ರೀ ಕಲ್ಲೇಶಪ್ಪ, ಅಂದಿನ ಕಾರ್ಯದರ್ಶಿ, ಕಡಬಗೆರೆ ಗ್ರಾಮ ಪಂಚಾಯತಿ, ಹರಪನಹಳ್ಳಿ ತಾಲ್ಲೂಕು (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ (ಪ್ರಸ್ತುತ ನಿವೃತ್ತ) ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ– ಪರಿಷ್ಕೃತ ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 24 ಇಎನ್‌ಕ್ಯೂ 2013, ದಿನಾಂಕ : 20–09–2013.
2. ಉಪ ನಿಬಂಧಕರು, ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಕಂಪ್ಲೆಂಟ್/ಉಪಲೋಕ್/ಬಿಡಿ/958/2007/ ಡಿಆರ್ಇ–1, ದಿನಾಂಕ : 21–10–2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 20-09-2013 ರ ಸರ್ಕಾರದ ಆದೇಶದಲ್ಲಿ (1) ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ, (2) ಶ್ರೀ ಕಲ್ಲೇಶಪ್ಪ, (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14-ಎ ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರವರಿಗೆ ವಹಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 20-09-2013ರ ಪತ್ರದಲ್ಲಿ ಉಪ ನಿಬಂಧಕರು, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ಮಾನ್ಯ ಉಪ ಲೋಕಾಯುಕ್ತರು, ದಿನಾಂಕ : 13-08-2013ರಂದು ಸಲ್ಲಿಸಿದ್ದ ವರದಿಯ ಕಂಡಿಕೆ-8ರಲ್ಲಿ respondent No. 2 and 3 with sanction required under Rules 214(2)(b)(i) of Karnataka Civil Services Rules as the respondent No.1 has retired from Government service in the month of March 2011, the respondent No. 2 has retired from Government service in the month of March 2012 ಎಂಬುದರ ಬದಲಾಗಿ respondent No. 2 and 3 with sanction requird under Rule 214(2)(b)(i) of Karnataka Civil Services Rules as the respondent No. 2 has retired from Government service in the month of March 2011 the respondent No. 3 has retired from Government service in the month of March 2012 ಎಂದು ತಿದ್ದಿ ಓದಿಕೊಳ್ಳುವಂತೆ ಹಾಗೂ ದಿನಾಂಕ : 20-09-2013 ರಂದು ಹೊರಡಿಸಲಾಗಿದ್ದ ಸರ್ಕಾರದ ಆದೇಶಕ್ಕೆ 2 ಮತ್ತು 3ನೇ ಎದುರುದಾರರು ನಿವೃತ್ತಿಯಾಗಿರುವುದರಿಂದ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214(2) (b)(i) ರಂತೆ ಪ್ರಕರಣವನ್ನು ಗೌರವಾನ್ವಿತ ಉಪಲೋಕಾಯುಕ್ತರವರಿಗೆ ವಹಿಸಿ ತಿದ್ದುಪಡಿ ಆದೇಶವನ್ನು ದಿನಾಂಕ : 6-11-2013 ರೊಳಗೆ ಹೊರಡಿಸುವಂತೆ ಕೋರಿರುತ್ತಾರೆ. ಅದರಂತೆ ಪರಿಷ್ಕೃತ ಆದೇಶ.

**ಆದೇಶ ಸಂಖ್ಯೆ : ಗ್ರಾಅಪ 24 ಇಎನ್‌ಕ್ಯೂ 2013, ಬೆಂಗಳೂರು ದಿನಾಂಕ : 23-11-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, (1) ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14-ಎ ರಡಿಯಲ್ಲಿ ಹಾಗೂ(2) ಶ್ರೀ ಕಲ್ಲೇಶಪ್ಪ, ಅಂದಿನ ಕಾರ್ಯದರ್ಶಿ, ಕಡಬಗೆರೆ ಗ್ರಾಮ ಪಂಚಾಯತಿ, ಹರಪನಹಳ್ಳಿ ತಾಲ್ಲೂಕು (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ (ಪ್ರಸ್ತುತ ನಿವೃತ್ತ) ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(2) (b)(i) ರನ್ವಯ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರವರಿಗೆ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 119**

**ಹೆಚ್.ಸಿ. ರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** (1)ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ, (2) ಶ್ರೀ ಕಲ್ಲೇಶಪ್ಪ (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** ಉಪ ನಿಬಂಧಕರು, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಕಂಪ್ಲೆಂಟ್/ಉಪಲೋಕ್/ಬಿಡಿ/958/2007/ಡಿಆರ್ಇ-1, ದಿನಾಂಕ : 20-08-2013.

**ಪ್ರಸ್ತಾವನೆ :**

ಉಪ ನಿಬಂಧಕರು, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರುರವರು ಮೇಲೆ ಓದಲಾದ ದಿನಾಂಕ : 20-08-2013ರ ಪತ್ರದಲ್ಲಿ (1)ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ, (2) ಶ್ರೀ ಕಲ್ಲೇಶಪ್ಪ, (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ ಇವರುಗಳ ವಿರುದ್ಧ ಕರ್ನಾಟಕ ಉಪ ಲೋಕಾಯುಕ್ತರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3) ರನ್ವಯ ನೀಡಿರುವ ವರದಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕಳುಹಿಸುತ್ತಾ, ಮಾನ್ಯ ಉಪ ಲೋಕಾಯುಕ್ತರವರ ಶಿಫಾರಸ್ಸಿನಂತೆ ಕ್ರಮವಹಿಸುವಂತೆ ಹಾಗೂ ಕೈಗೊಂಡ ಕ್ರಮದ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(4)ರನ್ವಯ ಲೋಕಾಯುಕ್ತ ಸಂಸ್ಥೆಗೆ ವರದಿ ಮಾಡಬೇಕೆಂದು ಕೋರಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರಡಿಯಲ್ಲಿ ಸಲ್ಲಿಸಿರುವ ದಿನಾಂಕ : 13-08-2013 ಸಂಖ್ಯೆ : Compt/Uplok/BD-958/2007/DRe-1 ರ ವರದಿಯಲ್ಲಿ ಫಿರ್ಯಾದುದಾರರಾದ ಶ್ರೀ ಏಕಾಂತಪ್ಪ, ಕಿಕ್ಕಿನಗೆರೆ ಅಂಚೆ, ಹರಪನಹಳ್ಳಿ ತಾಲ್ಲೂಕು ಇವರು ಕರ್ನಾಟಕ ಲೋಕಾಯುಕ್ತ ಕಛೇರಿಗೆ ದೂರು ಮನವಿ ಸಲ್ಲಿಸಿ, 2006ನೇ ಸಾಲಿನಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ಜೋಷಿ ಲಿಂಗಾಪುರ ಗ್ರಾಮದಲ್ಲಿ ಗೋಕಟ್ಟೆ ಕಾಮಗಾರಿಗೆ ಸಂಬಂಧಿಸಿದಂತೆ ಬೋಗಸ್ ಬಿಲ್ಲುಗಳನ್ನು ತಯಾರು ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ತಪ್ಪಿತಸ್ಥರ ವಿರುದ್ಧ ಸೂಕ್ತ ಶಿಸ್ತು ಕ್ರಮ ಕೈಗೊಳ್ಳಬೇಕೆಂದು ಕೋರಿದ್ದರ ಮೇರೆಗೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್-2 ತಾಂತ್ರಿಕ ವಿಭಾಗ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ರವರು ಕೈಗೊಂಡ ತನಿಖೆಯಲ್ಲಿ, (1)ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ, (2) ಶ್ರೀ ಕಲ್ಲೇಶಪ್ಪ (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ ಇವರುಗಳ ಸದರಿ ಕಾಮಗಾರಿಯಲ್ಲಿ ರೂ. 5,33,886/-ಗಳ ಖೊಟ್ಟಿ ದಾಖಲೆಗಳನ್ನು ಸೃಜಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವುದು ಕಂಡು ಬಂದಿರುವುದರಿಂದ ಸದರಿಯವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ರನ್ವಯ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರ ವರದಿ ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿ (1) ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ, (2) ಶ್ರೀ ಕಲ್ಲೇಶಪ್ಪ, (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ ಇವರುಗಳು ಸರ್ಕಾರದ ಅನುದಾನ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆಂದು ವರದಿ ಮಾಡಿರುವ ಹಿನ್ನೆಲೆಯಲ್ಲಿ, ಸದರಿ ಆಪಾದಿತ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತ ರವರಿಗೆ ವಹಿಸಲು ಸರ್ಕಾರವು ನಿರ್ಧರಿಸಿ, ಈ ಮುಂದಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಗ್ರಾಅಪ 24 ಇಎನ್‌ಕ್ಯೂ 2013, ಬೆಂಗಳೂರು ದಿನಾಂಕ : 20-09-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, (1) ಶ್ರೀ ಡಿ. ಓಂಕಾರಮೂರ್ತಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ, (2) ಶ್ರೀ ಕಲ್ಲೇಶಪ್ಪ, (ಪ್ರಸ್ತುತ ನಿವೃತ್ತ), ಮತ್ತು (3) ಶ್ರೀ ಹೆಚ್.ಆರ್. ಪುಟ್ಟಪ್ಪ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹರಪನಹಳ್ಳಿ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14-ಎ ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರವರಿಗೆ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 120

**ಹೆಚ್.ಸಿ. ರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** 2013-14ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 32 ಎಲ್‌ಸಿಎಲ್ 1982 ದಿನಾಂಕ: 17/18/03-1983 ಮತ್ತು ತಿದ್ದುಪಡಿ ದಿನಾಂಕ: 30-10-1996ರ ಅಧಿಸೂಚನೆ ಸಂಖ್ಯೆ: ಲಾ 112 ಎಲ್.ಸಿ.ಎಲ್ 1996.
2. ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಲಾ 120 ಎಲ್.ಸಿ.ಎಲ್ 2007, ದಿನಾಂಕ: 18-02-2008 ಮತ್ತು ಸೇರ್ಪಡೆ ದಿನಾಂಕ:16-05-2008.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ, ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ದಿ ಕರ್ನಾಟಕ ಗ್ರಾಂಟ್-ಇನ್-ಎಡ್-ಟು-ಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 17/18/03-1983ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ ತಿದ್ದುಪಡಿ ತರಲಾಗಿದ್ದು, ದಿನಾಂಕ: 30-10-1996ರ ಅಧಿಸೂಚನೆಯಲ್ಲಿ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾಧ ಅಧಿಸೂಚನೆ ದಿನಾಂಕ: 18/02/2008 ಮತ್ತು ಸೇರ್ಪಡೆ ದಿನಾಂಕ:16-05-2008ರನ್ವಯ ಸಹಾಯಾನುದಾನದ ಮೊತ್ತವನ್ನು ಹೆಚ್ಚಿಸಿದ ಕರ್ನಾಟಕ ವಕೀಲರ ಸಂಘಗಳಿಗೆ ಸಹಾಯಾನುದಾನ (ತಿದ್ದುಪಡಿ) ನಿಯಮಗಳು 2007 ದಿನಾಂಕ: 18/02/2008ರಿಂದ ಜಾರಿಗೆ ಬಂದಿದೆ.

09 ಜಿಲ್ಲೆಗಳ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಜಿಲ್ಲೆಯ ಹಾಗೂ ಅವರ ಅಧಿಕಾರ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕು ಸಂಘಗಳ ಪ್ರಸ್ತಾವನೆ ಹಾಗೂ 2011–12ರ ಹಣ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಿ ನಿಗಧಿಯಾಗಿರುವ ರೂ. 56.00 ಲಕ್ಷಗಳಲ್ಲಿ ಸದರಿ ಜಿಲ್ಲೆ ಹಾಗೂ ತಾಲ್ಲೂಕು ವಕೀಲರ ಸಂಘಗಳಿಗೆ ಹಂಚಿಕೆ ಮಾಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 104 ಎಲ್‌ಸಿಎಲ್ 2013 ಬೆಂಗಳೂರು, ದಿನಾಂಕ: 07–01–2014**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯದಲ್ಲಿನ ವಕೀಲರ ಸಂಘಗಳಿಗೆ ಸಹಾಯಾನುಧಾನ ನಿಯಮಗಳು 1983 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಅನುದಾನ ಕೋರಿ ಪ್ರಸ್ತಾವನೆ ಸಲ್ಲಿಸಿರುವ ಈ ಕೆಳಕಂಡ ವಕೀಲರ ಸಂಘಗಳಿಗೆ ರೂ. 10.45 ಲಕ್ಷ (ಹತ್ತು ಲಕ್ಷದ ನಲವತ್ತೈದು ಸಾವಿರ ಮಾತ್ರ) ಸಹಾಯಾನುದಾನವನ್ನು 2013–14ನೇ ಸಾಲಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| **ಬಾರ್ ಅಸೋಸಿಯೆಷನ್ ಹೆಸರು** | **ಬಿಡುಗಡೆ ಮಾಡಬಹುದಾದ ಮೊತ್ತ** |
|---|---|
| 1) ವಕೀಲರ ಸಂಘ, ಚಾಮರಾಜನಗರ | ರೂ. 95,000/– |
| 2) ವಕೀಲರ ಸಂಘ, ಗದಗ | ರೂ. 1,15,000/– |
| 3) ವಕೀಲರ ಸಂಘ, ಧಾರವಾಡ | ರೂ. 95,000/– |
| 4) ಬೆಂಗಳೂರು ನಗರ, ವಕೀಲರ ಸಂಘ, | ರೂ. 1,45,000/– |
| 5) ವಕೀಲರ ಸಂಘ, ಚಿಕ್ಕಮಂಗಳೂರು | ರೂ. 1,55,000/– |
| 6) ವಕೀಲರ ಸಂಘ, ಯಾದಗಿರಿ | ರೂ. 75,000/– |
| 7) ವಕೀಲರ ಸಂಘ, ರಾಮನಗರ | ರೂ. 95,000/– |
| 8) ವಕೀಲರ ಸಂಘ, ಶಿವಮೊಗ್ಗ | ರೂ. 1,55,000/– |
| 9) ವಕೀಲರ ಸಂಘ, ರಾಯಚೂರು | ರೂ. 1,15,000/– |
| **ಒಟ್ಟು** | **ರೂ. 10,45,000/–** |

ಎಲ್ಲಾ ವಿಭಾಗೀಯ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಗಳು ಅಂದರೆ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ವಕೀಲರ ಸಂಘಗಳಿಂದ ವರದಿಯೊಂದಿಗೆ ಅರ್ಜಿಗಳನ್ನು ಪಡೆದು ಪರಿಶೀಲಿಸಿ ಈ ಕೆಳಗೆ ನಿಗಧಿಪಡಿಸಲಾಗಿರುವಂತೆ

| | | |
|---|---|---|
| ತಾಲ್ಲೂಕು ಮಟ್ಟದ ವಕೀಲರ ಸಂಘ | – | ರೂ. 20,000 |
| ಜಿಲ್ಲಾ ಮಟದ ವಕೀಲರ ಸಂಘ | – | ರೂ. 35,000 |
| ಬೆಂಗಳೂರು ವಕೀಲರ ಸಂಘ | – | ರೂ. 1,25,000 |

ಮಂಜೂರು ಮಾಡಬಹುದು ಮತ್ತು ಆರ್ಥಿಕ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳ ಅನ್ವಯ ನಿಗಧಿತ ಕಾಲಮಿತಿಯೊಳಗೆ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣ ಪತ್ರ ಪಡೆದು, ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಯಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು. ಆರ್ಥಿಕ ವರ್ಷ ಮುಗಿದ ಕೂಡಲೇ ಈ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರಿಗಳು ಬಿಡುಗಡೆ ಮಾಡಿದ ಮತ್ತು ಆದ್ಯರ್ಪಣೆ ಮಾಡಿದ ವಿವರಗಳನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸುವುದು.

ಈ ಸಹಾಯಾನುದಾನವನ್ನು ಅಡ್ವೋಕೇಟ್ ಜನರಲ್ ರವರ ಮೂಲಕ ಲೆಕ್ಕ ಶೀರ್ಷಿಕೆ 2014–00–114–0–01–059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ಒದಗಿಸಿರುವ 2013–14ನೇ ಸಾಲಿನ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಕಾನೂನು ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ವನಇ 687 ಆಂಆಬಿ 2013 ದಿನಾಂಕ: 16–12–2013ರಲ್ಲಿ ನೀಡಲಾಗಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್. ಜಯರಾಮು**

ಸರ್ಕಾರದ ಅಧೀನ ಕಾರ್ಯದರ್ಶಿಗಳು (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**P.R. 58**

**SC - 25**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ನೀಡುವ ಕಾರ್ಯಕ್ರಮದ ಕುರಿತು ಪರಿಷ್ಕೃತ ಮಾರ್ಗಸೂಚಿಗಳು

**ಓದಲಾಗಿದೆ:** 1.ಸರ್ಕಾರದ ಆದೇಶ ಸಂಖ್ಯೆ: ಸಕಇ 208 ಬಿಎಂಎಸ್ 2010, ದಿ: 04/09/2010

2.ಸರ್ಕಾರದ ಆದೇಶ ಸಂಖ್ಯೆ: ಸಕಇ 178 ಬಿಎಂಎಸ್ 2012, ದಿ: 06/06/2012

3.ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕಕಡತ ಸಂಖ್ಯೆ: ಹಿಂವಕಇ/ಸ-5/ಸಿಆರ್-2/2013-14, ದಿನಾಂಕ:25/4/2013

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಆದೇಶದಲ್ಲಿ ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣ ಕಾರ್ಯಕ್ರಮಗಳಿಗೆ ಸಹಾಯಧನ ಮಂಜೂರು ಮಾಡುವ ಕುರಿತು ಮಾರ್ಗಸೂಚಿಗಳಲ್ಲಿ ಕೆಲವು ಮಾನದಂಡಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಲಾಗಿದೆ. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಸಹ ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸಹಾಯಧನ ಮಂಜೂರು ಮಾಡುವ ಕುರಿತು ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಏಕ ಕಡತದ ಮುಖೇನ ಪ್ರಸ್ತಾವನೆ ಸಲ್ಲಿಸಿ ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಧನ ಸಹಾಯ ಮಂಜೂರಾತಿ ಮಂಜೂರು ಮಾಡುವ ಕುರಿತು ಹಾಲಿ ಇರುವ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಮಾರ್ಗಸೂಚಿಗಳನ್ನು ಹೊರಡಿಸಲು ಪ್ರಸ್ತಾಪಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಮಂಜೂರಾತಿ ನೀಡುವ ಸಂಬಂಧ ಪರಿಷ್ಕೃತ ಮಾರ್ಗಸೂಚಿಗಳನ್ನು ಹೊರಡಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 359 ಬಿಎಂಎಸ್ 2013, ದಿನಾಂಕ: 21/12/2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ / ವಿದ್ಯಾರ್ಥಿ ನಿಲಯ ಕಟ್ಟಡಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸಹಾಯಧನ ನೀಡುವ ಕುರಿತು ಮಾರ್ಗಸೂಚಿಗಳನ್ನು ಅನುಬಂಧ-ಅ, ಅನುಬಂಧ-ಆ, ಮತ್ತು ಅನುಬಂಧ-ಇ ರಲ್ಲಿ ಲಗತ್ತಿಸಿರುವಂತೆ ಪರಿಷ್ಕರಿಸಿ ಆದೇಶಿಸಲಾಗಿದೆ. ಸದರಿ ಮಾರ್ಗಸೂಚಿಗಳು ಈ ತಕ್ಷಣದಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಉಪ ಕಾರ್ಯದರ್ಶಿ

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಅನುಬಂಧ-ಅ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ, ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಕಾರ್ಯಕ್ರಮದ ಮಾರ್ಗಸೂಚಿಗಳು**

**1. ಅರ್ಹತೆ:**

ಈ ಕಾರ್ಯಕ್ರಮದಡಿ ಸಹಾಯಧನ ಪಡೆಯಲು ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಮತ್ತು 3ಬಿ ಗೆ ಸೇರಿದ ನೋಂದಾಯಿತ ಸಂಘ /ಸ್ವಯಂ ಸೇವಾ ಸಂಸ್ಥೆ / ಟ್ರಸ್ಟ್‌ಗಳು ಅರ್ಹರಿರುತ್ತವೆ.

**2. ಸಹಾಯಧನ ಮಂಜೂರಾತಿಗಾಗಿ ನಿಬಂಧನೆಗಳು:**

1. ಸಹಾಯಧನ ಪಡೆಯುವ ಸಂಸ್ಥೆಯು ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960 ಅಥವಾ ಟ್ರಸ್ಟ್ ಕಾಯ್ದೆಯನ್ವಯ/ನೊಂದಣಿ ನಿಯಮಗಳನ್ವಯ ನೊಂದಾಯಿತ ಸಂಸ್ಥೆಯಾಗಿರಬೇಕು. ಸಂಸ್ಥೆಯು ನೊಂದಣಿಯಾಗಿ ಕನಿಷ್ಠ 3 ವರ್ಷಗಳಾಗಿರಬೇಕು.
2. ಟ್ರಸ್ಟ್‌ನ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರಬೇಕು.
3. ಸಹಾಯಧನ ಬಯಸುವ ಸಂಘ ಸಂಸ್ಥೆಗಳು/ಟ್ರಸ್ಟ್‌ಗಳು, ಹಿಂದಿನ ಮೂರು ವರ್ಷಗಳ ಆಡಿಟ್ ವರದಿಗಳನ್ನು ಚಾರ್ಟೆಡ್ ಅಕೌಂಟ್‌ರವರಿಂದ ಆಡಿಟ್ ಮಾಡಿಸಿ ಅರ್ಜಿಯೊಂದಿಗೆ ಸಲ್ಲಿಸಬೇಕು.
4. ಉದ್ದೇಶಿತ ಸಮುದಾಯ ಭವನ/ ವಿದ್ಯಾರ್ಥಿ ನಿಲಯದ ಕಟ್ಟಡದ ನಿರ್ಮಾಣದ ಅಂದಾಜು ವೆಚ್ಚ, ಸರ್ಕಾರದಿಂದ ನಿರೀಕ್ಷಿಸುವ/ಮಂಜೂರು ಮಾಡುವ ಸಹಾಯಧನ ಮೊತ್ತಕ್ಕಿಂತ ಕನಿಷ್ಠ ಎರಡರಷ್ಟಿರಬೇಕು.
5. ಸಹಾಯಧನ ಬಯಸುವ ಸಂಘ/ಸಂಸ್ಥೆಗಳು/ಟ್ರಸ್ಟ್‌ಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ಅವರ ಸಂಸ್ಥೆಯ ಹೆಸರಿನಲ್ಲಿ ಜಮೀನು/ನಿವೇಶನವನ್ನು ಹೊಂದಿರಬೇಕು ಅಥವಾ ಇತರೆ ಸರ್ಕಾರಿ/ಸರ್ಕಾರೇತರ ಸಂಸ್ಥೆಗಳಿಂದ ಕನಿಷ್ಠ 30 ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಗುತ್ತಿಗೆ(ಲೀಸ್) ಪಡೆದಿರಬೇಕು.

6. ಕಟ್ಟಡದ ನಕ್ಷೆಗೆ ಸ್ಥಳೀಯ ನಗರಸಭೆ/ಪುರಸಭೆ/ಪಂಚಾಯ್ತಿಯಿಂದ ಅನುಮೋದನೆ ಮತ್ತು ಪರವಾನಗಿಯನ್ನು ಪಡೆದಿರಬೇಕು ಹಾಗೂ ಅಂದಾಜು ಪಟ್ಟಿಯು ಸರ್ಕಾರಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಾಯಕ ಕಾರ್ಯಪಾಲಕ ಅಭಿಯಂತರರಿಂದ/ ಕಾರ್ಯಪಾಲಕ ಅಭಿಯಂತರರಿಂದ ದೃಢೀಕರಣಗೊಂಡಿರಬೇಕು.

7. ಈ ಕೆಳಗಿನ ಪ್ರದೇಶ / ಸ್ಥಳಗಳಿಗೆ ಈ ಕೆಳಗಿನ ಗರಿಷ್ಠ ಮಿತಿಯೊಳಗೊಳಪಟ್ಟು ಸಹಾಯನುಧನ ಮಂಜೂರು ಮಾಡಲಾಗುವುದು.

| ಕ್ರ ಸಂ | ಸ್ಥಳ | ಗರಿಷ್ಠ ಸಹಾಯಧನ |
|---|---|---|
| 1 | ಪಟ್ಟಣ ಪಂಚಾಯಿತಿ / ಗ್ರಾಮ ಪಂಚಾಯಿತಿ | ರೂ.10.00 ಲಕ್ಷ |
| 2 | ತಾಲ್ಲೂಕು ಕೇಂದ್ರಸ್ಥಾನ | ರೂ.25.00 ಲಕ್ಷ |
| 3 | ಜಿಲ್ಲಾ ಕೇಂದ್ರಸ್ಥಾನ | ರೂ.50.00 ಲಕ್ಷ |

8. ಸಹಾಯಧನ ಪಡೆಯಲಿಚ್ಚಿಸುವ ಸಂಸ್ಥೆಗಳು / ಟ್ರಸ್ಟ್‌ಗಳು **ಅನುಬಂಧ–ಆ** ರ ಅರ್ಜಿ ನಮೂನೆಯಲ್ಲಿ ನಿಗಧಿತ ದಾಖಲಾತಿಯೊಂದಿಗೆ, ಅರ್ಜಿಯನ್ನು ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು.

9. ಒಂದು ಸಂಘ ಅಥವಾ ಸಂಸ್ಥೆಯು ಈ ಕಾರ್ಯಕ್ರಮದಡಿ ಒಂದು ಬಾರಿ ಮಾತ್ರ ಸಹಾಯಧನ ಪಡೆಯಲು ಅರ್ಹವಾಗಿರುತ್ತದೆ. ಈ ಉದ್ದೇಶಕ್ಕಾಗಿ ಕೇಂದ್ರ /ರಾಜ್ಯ ಸರ್ಕಾರದ ಇತರೆ ಸರ್ಕಾರಿ ಅಥವಾ ಅರೆ ಸರ್ಕಾರಿ ಸಂಸ್ಥೆಗಳಿಂದ ಸಹಾಯಧನವನ್ನು ಪಡೆದಿರಬಾರದು.

10. ಸಹಾಯಧನ ಮಂಜೂರು ಆದೇಶ ಮಾಡಿದ ಕೂಡಲೇ ಸದರಿ ಸಂಸ್ಥೆಯು **ಅನುಬಂಧ–ಈ** ರಲ್ಲಿರುವಂತೆ ಕನಿಷ್ಠ ರೂ.100/– ರ ಛಾಪಾ ಕಾಗದದಲ್ಲಿ ಮಾಡಿದ ಪ್ರಮಾಣ ಪತ್ರವನ್ನು ಸಂಬಂಧಿಸಿದ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗೆ ಸಲ್ಲಿಸಬೇಕು.

11. ಮಂಜೂರು ಮಾಡಿದ ಸಹಾಯಧನವನ್ನು ಒಂದೇ ಕಂತಿನಲ್ಲಿ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗುವುದು.

12. ಸಹಾಯಧನವನ್ನು ಸಂಬಂಧಿಸಿದ ಸಂಸ್ಥೆಗೆ, ಕಟ್ಟಡದ ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಮೂರು ಕಂತುಗಳಲ್ಲಿ ಸಹಾಯಧನವನ್ನು ಬಿಡುಗಡೆ ಮಾಡಲಾಗುವುದು (ಮಂಜೂರಾತಿ ಆದೇಶದೊಂದಿಗೆ, ಮೇಲ್ಚಾವಣಿ ಮತ್ತು ಮುಕ್ತಾಯದ ನಂತರ, 25:50:25 ರ ಅನುಪಾತದಂತೆ).

13. ಕಟ್ಟಡ ನಿರ್ಮಾಣಕ್ಕೆ ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ನಾಲ್ಕು ತಿಂಗಳುಗಳೊಳಗಾಗಿ ಕಟ್ಟಡದ ಕಾಮಗಾರಿಯನ್ನು ಪ್ರಾರಂಭಿಸದಿದ್ದಲ್ಲಿ ಬಿಡುಗಡೆ ಮಾಡಲಾಗಿದ್ದ ಪೂರ್ಣ ಮೊತ್ತವನ್ನು ಸಂಸ್ಥೆಯಿಂದ ಜಿಲ್ಲಾಧಿಕಾರಿಗಳು ಹಿಂದಕ್ಕೆ ಪಡೆಯತಕ್ಕದ್ದು.

14. ಕಟ್ಟಡ ನಿರ್ಮಾಣಕ್ಕೆ, ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ಎರಡುವರ್ಷಗಳೊಳಗಾಗಿ, ನಿರ್ಮಾಣವನ್ನು ಪೂರ್ಣಗೊಳಿಸತಕ್ಕದ್ದು. ಎರಡು ವರ್ಷಗಳೊಳಗಾಗಿ ಕಟ್ಟಡವನ್ನು ಪೂರ್ಣಗೊಳಿಸದಿದ್ದಲ್ಲಿ ಅದುವರೆಗೆ ಮಂಜೂರು ಮಾಡಿದ ಮೊತ್ತವನ್ನು ಮತ್ತು ಅದರ ಮೇಲೆ ಶೇ.10 ರಷ್ಟು ಬಡ್ಡಿಯನ್ನು ಸದರಿ ಸಂಸ್ಥೆಯಿಂದ ವಸೂಲು ಮಾಡಲಾಗುವುದು. ಆದರೆ, ಸಂಸ್ಥೆಯು ನೀಡುವ ವಿವರಣೆಯನ್ನು ಪರಿಶೀಲಿಸಿ, ಕಟ್ಟಡ ನಿರ್ಮಾಣಕ್ಕೆ ಹೆಚ್ಚುವರಿ ಕಾಲಾವಕಾಶವನ್ನು, ಆಯುಕ್ತರು/ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ನೀಡಬಹುದು. ಆದರೆ ಇದು ಒಟ್ಟಾರೆ 3 ವರ್ಷಗಳಿಗೆ ಮೀರಬಾರದು.

15. ಕಟ್ಟಡದ ಕಾಮಗಾರಿಯ ಪ್ರಗತಿಯ ಬಗ್ಗೆ ಆರ್ಥಿಕ ಹಾಗೂ ಭೌತಿಕ ಪ್ರಗತಿಯ ವರದಿಯನ್ನು 8 ವಿವಿಧ ಕೋನಗಳಿಂದ ತೆಗೆದ ಛಾಯಾಚಿತ್ರಗಳ ಸಮೇತ, ಜಿಲ್ಲೆಯ ಜಿಲ್ಲಾಧಿಕಾರಿಗಳ ಮೂಲಕ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇವರಿಗೆ ಪ್ರತಿ ತ್ರೈಮಾಸಿಕದ ಕೊನೆಗೆ ಸಲ್ಲಿಸಬೇಕು.

16. ಈ ಕಟ್ಟಡಗಳನ್ನು ಸಮುದಾಯದ ಕಲ್ಯಾಣ ಕಾರ್ಯಕ್ರಮಗಳಿಗೆ ಮಾತ್ರ ಉಪಯೋಗಿಸತಕ್ಕದ್ದು. ರಾಜಕೀಯ ಉದ್ದೇಶಗಳಿಗೆ ಬಳಸತಕ್ಕದ್ದಲ್ಲ.

17. ಈ ಕಟ್ಟಡವನ್ನು ಹಿಂದುಳಿದ ವರ್ಗಗಳಿಗೆ ಸೇರಿದ ಇತರೆ ಸಮುದಾಯದವರಿಗೂ ಸಹ, ಸಾಮಾಜಿಕ / ಸಾಂಸ್ಕೃತಿಕ ಚಟುವಟಿಕೆಗಳಿಗೆ ಆದ್ಯತೆ ಮೇರೆಗೆ ರಿಯಾಯಿತಿ ದರದಲ್ಲಿ ನೀಡತಕ್ಕದ್ದು.

18. ಈ ಮೇಲಿನ ಸಹಾಯಧನದಿಂದ ವಿದ್ಯಾರ್ಥಿ ನಿಲಯವನ್ನು ನಿರ್ಮಿಸಿದಲ್ಲಿ, ಪ್ರವೇಶ ನೀಡುವ ವಿದ್ಯಾರ್ಥಿಗಳ ಪೈಕಿ ಶೇ.50 ರಷ್ಟು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಉಚಿತವಾಗಿ ವಸತಿ ಸೌಲಭ್ಯವನ್ನು ನೀಡಬೇಕು. ಈ ರೀತಿ ಪ್ರವೇಶ ನೀಡುವ (ಶೇ.50 ರಷ್ಟು) ವಿದ್ಯಾರ್ಥಿಗಳ ಮೀಸಲಾತಿ ಈ ಕೆಳಗಿನ ಅನುಪಾತದಂತೆ ಇರುವುದನ್ನು ಖಚಿತಪಡಿಸಿಕೊಳ್ಳಬೇಕು.

| ಕ್ರ ಸಂ | ಪ್ರವರ್ಗ | ಶೇಕಡ ಮೀಸಲಾತಿ (100 ಸ್ಥಾನಗಳಿಗೆ) | ಶೇಕಡ ಮೀಸಲಾತಿ (50 ಸ್ಥಾನಗಳಿಗೆ) |
|---|---|---|---|
| 1 | ಪ್ರವರ್ಗ–1 | 20 | 10 |
| 2 | 2ಎ | 25 | 13 |
| 3 | 2ಬಿ | 20 | 10 |
| 4 | 3ಎ | 20 | 10 |
| 5 | 3ಬಿ | 15 | 7 |
| | **ಒಟ್ಟು** | **100** | **50** |

19. ನಿರ್ಮಾಣ ಮಾಡಿರುವ ಕಟ್ಟಡದಿಂದ ಬರುವ ಆದಾಯದ ಬಗ್ಗೆ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸಬೇಕು ಮತ್ತು ಇದನ್ನು ಸಂಘ/ ಸಂಸ್ಥೆಯ ಧ್ಯೇಯೋದ್ಧೇಶಗಳಿಗೆ ಅನುಗುಣವಾಗಿ ಸಾರ್ವಜನಿಕರ ಉದ್ದೇಶಕ್ಕಾಗಿ ಮಾತ್ರ ಬಳಸಬೇಕು. ಈ ರೀತಿ ಮಾಡುತ್ತಿರುವ ಬಗ್ಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ ಪ್ರತಿ ಆರು ತಿಂಗಳಿಗೊಮ್ಮೆ ಭೇಟಿ ನೀಡಿ ಪರಿಶೀಲನೆ ಮಾಡಬೇಕು.

20. ವಿದ್ಯಾರ್ಥಿ ನಿಲಯ / ಸಮುದಾಯ ಭವನ ಕಟ್ಟಡವನ್ನು ಕಟ್ಟಿದ ನಂತರ ಸಂಸ್ಥೆಯು ಉಪಯೋಗಿಸದೇ ಸತತವಾಗಿ ಒಂದು ವರ್ಷ ಖಾಲಿ ಬಿಟ್ಟಲ್ಲಿ ಅಥವಾ ಸರಿಯಾದ ರೀತಿಯಲ್ಲಿ ಲೆಕ್ಕಪತ್ರಗಳನ್ನು ನಿರ್ವಹಿಸದೇ ಇದ್ದಲ್ಲಿ ಅದರಿಂದ ಬರುವ ಆದಾಯವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಬಳಸದೇ ಇದ್ದಲ್ಲಿ, ಇಲಾಖೆಯು ಸದರಿ ಸಮುದಾಯ ಭವನ /ವಿದ್ಯಾರ್ಥಿ ನಿಲಯವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಅಧಿಕಾರವನ್ನು ಹೊಂದಿರುತ್ತದೆ.

21. ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಗಳ ಮಾದರಿ ವಿನ್ಯಾಸಗಳ ತಯಾರಿಕೆ, ಆಯಾ ಪ್ರದೇಶಗಳಿಗೆ ಹಾಗೂ ಹವಾಮಾನಗಳಿಗೆ ಅನುಗುಣವಾಗಿ ಇರಬೇಕು. ಕಟ್ಟಡವು ವಿದ್ಯಾರ್ಥಿ ನಿಲಯವಾದಲ್ಲಿ ಪ್ರತಿ ವಿದ್ಯಾರ್ಥಿಗೆ ಕನಿಷ್ಠ 40 ಚ.ಅ ಸ್ಥಳಾವಕಾಶವಿರತಕ್ಕದ್ದು, ಹಾಗೂ ಇದಕ್ಕೆ ಪೂರಕವಾಗಿ ಪ್ರತ್ಯೇಕ ಅಡುಗೆ ಕೋಣೆ, ಊಟದ ಕೋಣೆ ಮತ್ತು ಶೌಚಾಲಯಗಳನ್ನು ಹೊಂದಿರಬೇಕು.

**3. ಇಲಾಖಾ ಅಧಿಕಾರಿಗಳಿಗೆ ಸೂಚನೆಗಳು:**

1. ಈ ಕೆಳಗೆ ನಮೂದಿಸಿರುವ ಸಹಾಯಧನವನ್ನು ಮಂಜೂರು ಮಾಡುವ ಅಧಿಕಾರವನ್ನು ಈ ಕೆಳಗಿನವರಿಗೆ ಈ ಕೆಳಗಿನಂತೆ ವಹಿಸಲಾಗಿದೆ.

(ಅ) ರೂ.10.00ಲಕ್ಷಗಳವರೆಗೆ – ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

(ಆ) ರೂ.50.00ಲಕ್ಷಗಳವರೆಗೆ – ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

2. ಈ ಕಾರ್ಯಕ್ರಮದಡಿ, ಸರ್ಕಾರದಿಂದ ಬಿಡುಗಡೆಯಾಗುವ ಮೊತ್ತವನ್ನು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪಿ.ಡಿ ಖಾತೆಗೆ ಜಮಾ ಮಾಡಿಕೊಂಡು, ಪ್ರಗತಿಗೆ ಅನುಗುಣವಾಗಿ ಸಹಾಯಧನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಮರು ಬಿಡುಗಡೆ ಮಾಡಬೇಕು.

3. ಸಹಾಯಧನವನ್ನು ಸಂಬಂಧಿಸಿದ ಸಂಸ್ಥೆಗೆ, ಕಟ್ಟಡದ ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಮೂರು ಕಂತುಗಳಲ್ಲಿ ಸಹಾಯಧನವನ್ನು ಬಿಡುಗಡೆ ಮಾಡಬೇಕು. (ಮಂಜೂರಾತಿ ಆದೇಶದೊಂದಿಗೆ, ಮೇಲ್ಛಾವಣಿ ಮತ್ತು ಮುಕ್ತಾಯದ ನಂತರ, 25:50:25 ರ ಅನುಪಾತದಂತೆ)

4. ರಾಜ್ಯದ ಎಲ್ಲಾ ಪ್ರದೇಶಗಳಿಗೆ ಸಮಾನಾವಕಾಶ ನೀಡುವ ದೃಷ್ಟಿಯಿಂದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಸರಿಸುಮಾರು ಒಂದೇ ಮೊತ್ತದ ಸಹಾಯಧನವನ್ನು ಮಂಜೂರು ಮಾಡಬೇಕು.

5. ಸಂಘ/ಸಂಸ್ಥೆಗಳು ಸಲ್ಲಿಸುವ ಪ್ರಸ್ತಾವನೆಯ ಸಂಬಂಧ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಸ್ಥಳ ಪರಿಶೀಲನೆ ಮಾಡಿ ತಮ್ಮ ಶಿಫಾರಸ್ಸಿನೊಂದಿಗೆ (ಚೆಕ್‌ಲಿಸ್ಟ್ ನಮೂನೆಯೊಂದಿಗೆ) ಮತ್ತು ಜಿಲ್ಲಾಧಿಕಾರಿಗಳ ಅನುಮೋದನೆಯೊಂದಿಗೆ ಪ್ರಸ್ತಾವನೆಯನ್ನು ಆಯುಕ್ತರು/ನಿರ್ದೇಶಕರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಬೇಕು. ಆಯುಕ್ತರು/ನಿರ್ದೇಶಕರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು, ಪ್ರಸ್ತಾವನೆಯನ್ನು ಅವರಿಗೆ ಪ್ರದತ್ತವಾದ ಆರ್ಥಿಕ ಅಧಿಕಾರ ಪರಿಮಿತಿಯೊಳಗೆ ಸಹಾಯಧನವನ್ನು ಮಂಜೂರು ಮಾಡಿ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡುವುದು. ಆಯುಕ್ತರಿಗೆ ದತ್ತವಾದ ಆರ್ಥಿಕ ಮಿತಿ ಮೀರಿದ್ದಲ್ಲಿ ಅಂತಹ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.

6. ಸಹಾಯಧನವನ್ನು ಮಂಜೂರು ಮಾಡಿದ ಸಂಸ್ಥೆಗೆ ಬಿಡುಗಡೆ ಮಾಡುವ ಮುಂಚೆ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಸಂಸ್ಥೆಯಿಂದ **ಅನುಬಂಧ–ಇ** ರಲ್ಲಿರುವಂತೆ ಕನಿಷ್ಠ ರೂ.100/–ಗಳ ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಪಡೆಯಬೇಕು.

7. ನಿರ್ಮಾಣ ಮಾಡಿರುವ ಕಟ್ಟಡದಿಂದ ಬರುವ ಆದಾಯದ ಬಗ್ಗೆ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸಿರುವ ಬಗ್ಗೆ ಹಾಗೂ ಇದನ್ನು ಸಂಘ/ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಸಾರ್ವಜನಿಕರ ಉದ್ದೇಶಕ್ಕಾಗಿ ಮಾತ್ರ ಬಳಸುತ್ತಿರುವ ಬಗ್ಗೆ, ವಿದ್ಯಾರ್ಥಿ ನಿಲಯವಾಗಿದ್ದಲ್ಲಿ ಶೇ.50 ರಷ್ಟು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಮೀಸಲಾತಿ ಪ್ರಕಾರ ಪ್ರವೇಶ ನೀಡಿರುವ ಬಗ್ಗೆ ಹಾಗೂ ಉಚಿತವಾಗಿ ವಸತಿ ಸೌಲಭ್ಯ ನೀಡಿರುವ ಬಗ್ಗೆ, ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ ಪ್ರತಿ ಆರು ತಿಂಗಳಿಗೊಮ್ಮೆ ಸಂಘ/ಸಂಸ್ಥೆಗೆ ಭೇಟಿ ನೀಡಿ ಪರಿಶೀಲನೆ ಮಾಡಬೇಕು ಮತ್ತು ಈ ಬಗ್ಗೆ ವರದಿಯನ್ನು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಬೇಕು.

8. ಕಟ್ಟಡವನ್ನು ಕಟ್ಟಿದ ನಂತರ ಸಂಸ್ಥೆಯು ಉಪಯೋಗಿಸದೇ ಸತತವಾಗಿ ಒಂದು ವರ್ಷ ಖಾಲಿ ಬಿಟ್ಟಿದ್ದಲ್ಲಿ ಅಥವಾ ಸೂಕ್ತವಾಗಿ ಲೆಕ್ಕಪತ್ರಗಳನ್ನು ನಿರ್ವಹಿಸದೇ ಇದ್ದಲ್ಲಿ, ಅದರಿಂದ ಬರುವ ಆದಾಯವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಬಳಸದೇ ಇದ್ದಲ್ಲಿ, ಇಲಾಖೆಯು ಸದರಿ ಸಮುದಾಯ ಭವನ/ವಿದ್ಯಾರ್ಥಿ ನಿಲಯವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು.

**ಅನುಬಂಧ–ಆ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**(ಸರ್ಕಾರದ ಆದೇಶ ಸಂಖ್ಯೆ:ಹಿಂವಕ 359 ಬಿಎಂಎಸ್ 2013, ದಿನಾಂಕ: 21/12/2013 ರಂತೆ)**

ಗೆ:

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ

. . . . . . . . . . . . . . . ಜಿಲ್ಲೆ.

**ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಪಡೆಯಲು ಅರ್ಜಿ**

| | | |
|---|---|---|
| 1 | ಸಂಸ್ಥೆಯ ಪೂರ್ಣ ಹೆಸರು :<br>ವಿಳಾಸ:<br><br>ದೂರವಾಣಿ ಸಂಖ್ಯೆ: | |

| | | |
|---|---|---|
| 2 | ಸಂಸ್ಥೆಯು ಹಿಂದುಳಿದ ವರ್ಗಗಳ ಯಾವ ಪ್ರವರ್ಗ/ಜಾತಿಗೆ ಸೇರಿರುತ್ತದೆ } ಪ್ರವರ್ಗ: ಜಾತಿ: | |
| 3 | ಸಂಸ್ಥೆಯ ನೋಂದಣಿ } ಆದೇಶ ಸಂಖ್ಯೆ: ದಿನಾಂಕ: | |
| 4 | ಜಿಲ್ಲಾ ನೋಂದಣಾಧಿಕಾರಿಗೆ ಯಾವ ಅವಧಿಯವರೆಗೆ ಲೆಕ್ಕಪತ್ರ ಸಲ್ಲಿಸಲಾಗಿದೆ. | |
| 5 | ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಅಧ್ಯಕ್ಷರ ಹೆಸರು | |
| 6 | ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರ ಪಟ್ಟಿ ಮತ್ತು ವಿಳಾಸದ ವಿವರಗಳನ್ನು ಲಗತ್ತಿಸಿದೆಯೇ? | |
| 7 | ಸಂಸ್ಥೆಯ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರುತ್ತಾರೆಯೇ ಅಥವಾ ಇಲ್ಲವೇ? | |
| 8 | ಸಂಸ್ಥೆಯು ಬೈಲಾ ಪ್ರತಿಯನ್ನು ಲಗತ್ತಿಸಿದೆಯೇ? | |
| 9 | ಸಂಸ್ಥೆಯು ಈ ಹಿಂದೆ ಈ ಉದ್ದೇಶಕ್ಕಾಗಿ ರಾಜ್ಯ/ಕೇಂದ್ರ ಸರ್ಕಾರ ಅಥವಾ ಅರೆ ಸರ್ಕಾರಿ ಸಂಸ್ಥೆಗಳಿಂದ ಸಹಾಯಧನ ಪಡೆದಿದೆಯೇ? | |
| 10 | ಸಹಾಯಧನ ಕೋರಿರುವ ಉದ್ದೇಶ (ಕಟ್ಟಡ ನಿರ್ಮಾಣ) } ಸಮುದಾಯಭವನ ವಿದ್ಯಾರ್ಥಿ ನಿಲಯ | |
| 11 | ನಿವೇಶನ ಸಂಸ್ಥೆಯ ಹೆಸರಿನಲ್ಲಿದೆಯೇ? | ಇದೆ / ಇಲ್ಲ |
| 12 | ಕಟ್ಟಡ ನಿರ್ಮಾಣ ಮಾಡಲು ಸಂಸ್ಥೆ ಹೊಂದಿರುವ ನಿವೇಶನದ ವಿವರ } ನಿವೇಶನದ ಸಂಖ್ಯೆ/ ಜಮೀನಿನ ಸರ್ವೆ ನಂ: ವಿಸ್ತೀರ್ಣ: ಉದ್ದ– ಅಗಲ– **ನಿವೇಶನ ಇರುವ ಸ್ಥಳದ ಪೂರ್ಣವಿಳಾಸ:** | |
| 13 | ನಿವೇಶನವನ್ನು ಲೀಸ್‌ಗೆ ಪಡೆದಿದ್ದಲ್ಲಿ } ಲೀಸ್ ಅವಧಿ: ಲೀಸ್ ಮೇಲೆ ಪಡೆದ ದಿನಾಂಕ: **ಯಾರಿಂದ ಪಡೆಯಲಾಗಿದೆ:** | |
| 14 | ನಿವೇಶನಕ್ಕೆ ಸಂಬಂಧಿಸಿದ ಪ್ರಮಾಣ ಪತ್ರ ಲಗತ್ತಿಸಲಾಗಿದೆಯೇ? } ಖಾತಾ ಪ್ರಮಾಣ ಪತ್ರ ಋಣಭಾರ ಪ್ರಮಾಣ ಪತ್ರ | |
| 15 | ಪ್ರಸ್ತಾಪಿಸಿದ ಕಟ್ಟಡದ ನಕ್ಷೆ ಮತ್ತು ಅಂದಾಜು ಪಟ್ಟಿ ಲಗತ್ತಿಸಲಾಗಿದೆಯೇ? (ಸಹಾಯಕ ಕಾರ್ಯಪಾಲಕ / ಕಾರ್ಯಪಾಲಕ ಅಭಿಯಂತರರಿಂದ ದೃಢೀಕರಿಸಲ್ಪಟ್ಟಿರಬೇಕು) } ಕಟ್ಟಡದ ನಕ್ಷೆ ಅಂದಾಜು ಪಟ್ಟಿ ಕಟ್ಟಡದ ಅಂದಾಜು ವೆಚ್ಚ | |
| 16 | ಪ್ರಸ್ತಾಪಿಸಿದ ಕಟ್ಟಡ ನಿರ್ಮಿಸಲು ಸ್ಥಳೀಯ ಸಂಸ್ಥೆಗಳಿಂದ ಪರವಾನಗಿ ಪಡೆಯಲಾಗಿದೆಯೇ? | |
| 17 | ಕಟ್ಟಡ ನಿರ್ಮಾಣದ ಒಟ್ಟು ವೆಚ್ಚದಲ್ಲಿ ಸರ್ಕಾರದ ಸಹಾಯಧನದ ಹೊರತು ಬಾಕಿ ಮೊತ್ತವನ್ನು ಭರಿಸುವ ಮೂಲಗಳ ವಿವರ ಲಗತ್ತಿಸಿದೆಯೇ? | |
| 18 | ಸಂಸ್ಥೆಯು ಕಳೆದ 3 ವರ್ಷಗಳ ಲೆಕ್ಕಪತ್ರ/ಆಡಿಟ್ ವರದಿಯನ್ನು ಲಗತ್ತಿಸಲಾಗಿದೆಯೇ? | |

ಸರ್ಕಾರ ಈ ಸಂಬಂಧ ಹೊರಡಿಸಿರುವ ಮಾರ್ಗಸೂಚಿಗಳನ್ನು ತಿಳಿದುಕೊಂಡಿರುತ್ತೇನೆ. ಈ ಮೇಲೆ ನಮೂದಿಸಲಾದ ವಿವರಗಳು ಸತ್ಯವಾಗಿರುತ್ತವೆ. ನಮ್ಮ ಸಂಸ್ಥೆಗೆ ಸಹಾಯಧನ ಮಂಜೂರು ಮಾಡಿದಲ್ಲಿ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು, ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಲು ಬದ್ಧನಾಗಿರುತ್ತೇನೆ. ಆದ ಕಾರಣ ಈ ಮೇಲಿನ ಉದ್ದೇಶಕ್ಕಾಗಿ ನಮ್ಮ ಸಂಸ್ಥೆಗೆ ರೂ. . . . . . . . . . . . . . . . . . . . . . . . . . . ಗಳ ಸಹಾಯಧನ ಮಂಜೂರು ಮಾಡಬೇಕೆಂದು ಕೋರುತ್ತೇನೆ.

**ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿದ ಈ ಕೆಳಕಂಡ ದಾಖಲೆಗಳನ್ನು ಸಲ್ಲಿಸಿದೆ.**

1. ಸಂಸ್ಥೆಯು ಹಿಂದುಳಿದ ವರ್ಗಗಳ ಯಾವ ಪ್ರವರ್ಗಕ್ಕೆ ಸೇರಿರುತ್ತದೆ ಎಂಬ ಬಗ್ಗೆ ದಾಖಲಾತಿ.
2. ಸಂಸ್ಥೆಯ ನೋಂದಣಿ ಪ್ರಮಾಣ ಪತ್ರ
3. ಜಿಲ್ಲಾ ನೋಂದಣಾಧಿಕಾರಿಗೆ ಹಿಂದಿನ ಸಾಲಿನವರೆಗೆ ಸಲ್ಲಿಸಿರುವ ಲೆಕ್ಕಪತ್ರದ ದೃಢೀಕರಣ ಪತ್ರ
4. ಸಂಸ್ಥೆಯ ಬೈಲಾ ಪ್ರತಿ
5. ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರ ಪಟ್ಟಿ ಮತ್ತು ವಿಳಾಸ
6. ಸರ್ಕಾರದಿಂದ ಸಹಾಯಧನ ಪಡೆಯುವ ಬಗ್ಗೆ ಸಂಸ್ಥೆಯ ಸಭೆಯಲ್ಲಿ ಚರ್ಚಿಸಿ ತೀರ್ಮಾನಿಸಿದ ನಡವಳಿಗಳು
7. ಸಂಸ್ಥೆಯ ಹೆಸರಿನಲ್ಲಿ ನಿವೇಶನ ಅಥವಾ ಜಮೀನು ಹೊಂದಿರುವ ಬಗ್ಗೆ ಖಾತಾ ಪ್ರತಿ
8. ಋಣಭಾರ ಪ್ರಮಾಣ ಪತ್ರ
9. ಅರ್ಜಿ ಸಲ್ಲಿಸುವ ದಿನಾಂಕದ ಹಿಂದಿನ ಸಾಲಿನವರೆಗೆ ಕಂದಾಯ ಪಾವತಿಸಿರುವ ಬಗ್ಗೆ ರಶೀದಿ ಪ್ರತಿಗಳು
10. ಸಂಸ್ಥೆಯ ಆರ್ಥಿಕ ಪರಿಸ್ಥಿತಿ ಕುರಿತಂತೆ ಕಳೆದ 3 ವರ್ಷಗಳ ಲೆಕ್ಕಪತ್ರ/ಆಡಿಟ್ ವರದಿ (ಚಾರ್ಟೆಡ್ ಅಕೌಂಟೆಂಟ್ ದೃಢೀಕರಿಸಿರಬೇಕು)
11. ಸ್ಥಳೀಯ ಸಂಸ್ಥೆಗಳಿಂದ ಕಟ್ಟಡದ ನಕ್ಷೆಗೆ (ಮೂಲ ಪ್ರತಿ) ಪಡೆದ ಪರವಾನಗಿ
12. ಅಂದಾಜು ಪಟ್ಟಿಯು ಅಧಿಕೃತ ಅಭಿಯಂತರಿಂದ ದೃಢೀಕರಿಸಿದ ಅಂದಾಜು ಪಟ್ಟಿಯ ಪ್ರತಿ
13. ಕಟ್ಟಡ ನಿರ್ಮಾಣದ ಒಟ್ಟು ವೆಚ್ಚದಲ್ಲಿ ಸರ್ಕಾರದ ಅನುದಾನದ ಹೊರತು ಪಡಿಸಿ ಬಾಕಿ ಮೊತ್ತವನ್ನು ಭರಿಸುವ ಮೂಲಗಳ ವಿವರ

ದಿನಾಂಕ: ಸಹಿ:

ಸ್ಥಳ: ಅಧ್ಯಕ್ಷರು

---

ಕಛೇರಿ ಉಪಯೋಗಕ್ಕಾಗಿ

ಕಡತ ಸಂಖ್ಯೆ: ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ,. .

. . . . . . . . . . ಜಿಲ್ಲೆ, ದಿನಾಂಕ:. . . . . . .

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ವರದಿ ಮತ್ತು ಶಿಫಾರಸ್ಸು

ಸಹಿ:

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ

*ಜಿಲ್ಲಾಧಿಕಾರಿಗಳ ಶಿಫಾರಸ್ಸು:*

ದಿನಾಂಕ: ಸಹಿ:

ಜಿಲ್ಲಾಧಿಕಾರಿಗಳು

ಕಡತ ಸಂಖ್ಯೆ:

*ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಶಿಫಾರಸ್ಸು*

ದಿನಾಂಕ: ಸಹಿ:

ಆಯುಕ್ತರು

**ಅನುಬಂಧ–ಇ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ವಿವಿಧ ಸಮುದಾಯಗಳಿಗೆ, ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಪಡೆಯಲು ಸಲ್ಲಿಸಬೇಕಾದ**

**ಪ್ರಮಾಣ ಪತ್ರ**

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು, . . . . . ಜಿಲ್ಲೆ ಇವರಿಗೆ, ಅಧ್ಯಕ್ಷರು /ಕಾರ್ಯದರ್ಶಿಗಳು . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . .( ಸಂಘ/ಸಂಸ್ಥೆಯ ಹೆಸರು ಮತ್ತು ವಿಳಾಸ) ಆದ ನಾವು . . . . . . .

. . . ಜಿಲ್ಲೆಯ . . . . . . . . . . ತಾಲ್ಲೂಕಿನ . . . . . . . . . . ಗ್ರಾಮದಲ್ಲಿ ಸಮುದಾಯ ಭವನ/ವಿದ್ಯಾರ್ಥಿ ನಿಲಯದ ಕಟ್ಟಡ ನಿರ್ಮಾಣ ಮಾಡಲು ಸರ್ಕಾರದ ಸಹಾಯಧನಕ್ಕಾಗಿ ಅರ್ಜಿ ಸಲ್ಲಿಸಿದ್ದು, ಸರ್ಕಾರ/ಆಯುಕ್ತರು ಈ ಉದ್ದೇಶಕ್ಕಾಗಿ ರೂ. . . . . . . ಲಕ್ಷಗಳ ಸಹಾಯಧನವನ್ನು ಆದೇಶ ಸಂಖ್ಯೆ:. . . . . . . . . . . . . . . . . . . . . , ದಿನಾಂಕ:. . . . . . . . . ರಂತೆ ಮಂಜೂರು ಮಾಡಿರುತ್ತಾರೆ. , ಸರ್ಕಾರದ ಆದೇಶದ (ಮಾರ್ಗಸೂಚಿ) ಪ್ರಕಾರ ನಾವು ಈ ಕೆಳಗಿನಂತೆ ಪ್ರಮಾಣ ಪತ್ರವನ್ನು ಸಲ್ಲಿಸುತ್ತಿದ್ದೇವೆ.

1. ನಮ್ಮ ಸಂಸ್ಥೆಯು ಹಿಂದುಳಿದ ವರ್ಗಗಳ ಪ್ರವರ್ಗ– . . . . . . ರ . . . . . ಜಾತಿಗೆ ಸೇರಿದ್ದಾಗಿರುತ್ತದೆ.
2. ನಮ್ಮ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರುತ್ತಾರೆ.
3. ನಮ್ಮ ಸಂಸ್ಥೆಯು ಇದೇ ಮೊದಲ ಬಾರಿಗೆ ಸರ್ಕಾರ ಸಹಾಯಧನವನ್ನು ಪಡೆದಿರುತ್ತದೆ. ಈ ಉದ್ದೇಶಕ್ಕಾಗಿ ಕೇಂದ್ರ /ರಾಜ್ಯ ಸರ್ಕಾರದ ಇತರೆ ಸರ್ಕಾರಿ ಅಥವಾ ಅರೆ ಸರ್ಕಾರಿ ಸಂಸ್ಥೆಗಳಿಂದ ಸಹಾಯಧನವನ್ನು ಪಡೆದಿರುವುದಿಲ್ಲ.
4. ನಮ್ಮ ಸಂಸ್ಥೆಗೆ, ಕಟ್ಟಡ ನಿರ್ಮಾಣಕ್ಕೆ, ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ಎರಡುವರ್ಷಗಳೊಳಗಾಗಿ, ನಿರ್ಮಾಣವನ್ನು ಪೂರ್ಣಗೊಳಿಸುತ್ತೇವೆ. ಎರಡು ವರ್ಷಗಳೊಳಗಾಗಿ ಕಟ್ಟಡವನ್ನು ಪೂರ್ಣಗೊಳಿಸದಿದ್ದಲ್ಲಿ ಅದುವರೆಗೆ ಸರ್ಕಾರ ಮಂಜೂರು ಮಾಡಿದ ಮೊತ್ತವನ್ನು ಮತ್ತು ಅದರ ಮೇಲೆ ಶೇ.10 ರಷ್ಟು ಬಡ್ಡಿಯನ್ನು ನಮ್ಮ ಸಂಸ್ಥೆಯಿಂದ ಸರ್ಕಾರ ವಸೂಲು ಮಾಡಬಹುದು.
5. ಈ ಕಟ್ಟಡಗಳನ್ನು ಸಮುದಾಯದ ಕಲ್ಯಾಣ ಕಾರ್ಯಕ್ರಮಗಳಿಗೆ ಮಾತ್ರ ಉಪಯೋಗಿಸಲಾಗುವುದು. ಇದನ್ನು ರಾಜಕೀಯ ಉದ್ದೇಶಗಳಿಗೆ ಬಳಸುವುದಿಲ್ಲ.
6. ಈ ಕಟ್ಟಡವನ್ನು ಹಿಂದುಳಿದ ವರ್ಗಗಳಿಗೆ ಸೇರಿದ ಇತರೆ ಸಮುದಾಯದವರಿಗೂ ಸಹ, ಸಾಮಾಜಿಕ / ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಆದ್ಯತೆ ಮೇರೆಗೆ ರಿಯಾಯಿತಿ ದರದಲ್ಲಿ ನೀಡಲಾಗುವುದು.
7. ಸರ್ಕಾರ ನೀಡುವ ಸಹಾಯಧನದಿಂದ ವಿದ್ಯಾರ್ಥಿ ನಿಲಯವನ್ನು ನಿರ್ಮಿಸಿದಲ್ಲಿ, ಪ್ರವೇಶ ನೀಡುವ ವಿದ್ಯಾರ್ಥಿಗಳ ಪೈಕಿ ಶೇ.50 ರಷ್ಟು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಉಚಿತವಾಗಿ ವಸತಿ ಸೌಲಭ್ಯವನ್ನು ನೀಡಲಾಗುತ್ತದೆ. ಹಾಗೂ ಈ ಕೆಳಕಂಡ ನಿಗಧಿಪಡಿಸಿರುವ ಮೀಸಲಾತಿ ಅನುಪಾತದಂತೆ ಪ್ರವೇಶಾವಕಾಶವನ್ನು ನೀಡಲಾಗುವುದು.

| **ಕ್ರ ಸಂ** | **ಪ್ರವರ್ಗ** | **ಶೇಕಡ ಮೀಸಲಾತಿ (100 ಸ್ಥಾನಗಳಿಗೆ)** | **ಶೇಕಡ ಮೀಸಲಾತಿ (50 ಸ್ಥಾನಗಳಿಗೆ)** |
|---|---|---|---|
| 1 | ಪ್ರವರ್ಗ–1 | 20 | 10 |
| 2 | 2ಎ | 25 | 13 |
| 3 | 2ಬಿ | 20 | 10 |
| 4 | 3ಎ | 20 | 10 |
| 5 | 3ಬಿ | 15 | 7 |
| | **ಒಟ್ಟು** | **100** | **50** |

8. ನಿರ್ಮಾಣ ಮಾಡಿರುವ ಕಟ್ಟಡದಿಂದ ಬರುವ ಆದಾಯದ ಬಗ್ಗೆ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸಲಾಗುವುದು ಮತ್ತು ಇದನ್ನು ಸಂಘ/ಸಂಸ್ಥೆಯ ಧ್ಯೆಯೋದ್ದೇಶಗಳಿಗೆ ಅನುಗುಣವಾಗಿ ಸಾರ್ವಜನಿಕರ ಉದ್ದೇಶಕ್ಕಾಗಿ ಮಾತ್ರ ಬಳಸಲಾಗುವುದು.
9. ಸಹಾಯಧನ ಸದ್ಬಳಕೆ ಆಗುತ್ತಿರುವ ಬಗ್ಗೆ, ಕಟ್ಟಡದಿಂದ ಬರುವ ಆದಾಯಕ್ಕೆ ಸಂಬಂಧಿಸಿದಂತೆ ಸೂಕ್ತವಾಗಿ ಲೆಕ್ಕಪತ್ರಗಳನ್ನು ನಿರ್ವಹಣೆ ಮಾಡುತ್ತಿರುವ ಬಗ್ಗೆ, ಮೀಸಲಾತಿಯ ಪ್ರಕಾರ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ನೀಡುತ್ತಿರುವ ಬಗ್ಗೆ, ಸಮುದಾಯ ಭವನವನ್ನು ಇತರೆ ಹಿಂದುಳಿದ ವರ್ಗಗಳಿಗೆ ರಿಯಾಯಿತಿ ದರದಲ್ಲಿ ನೀಡುತ್ತಿರುವ ಬಗ್ಗೆ ಸರ್ಕಾರದ ಅಧಿಕಾರಿಗಳು ಪರಿಶೀಲಿಸಬಹುದು.
10. ಕಟ್ಟಡವನ್ನು ಕಟ್ಟಿದ ನಂತರ ಸಂಸ್ಥೆಯು ಉಪಯೋಗಿಸದೇ ಸತತವಾಗಿ ಒಂದು ವರ್ಷ ಖಾಲಿ ಬಿಟ್ಟಲ್ಲಿ ಅಥವಾ ಸರಿಯಾದ ರೀತಿಯಲ್ಲಿ ಲೆಕ್ಕಪತ್ರಗಳನ್ನು ನಿರ್ವಹಿಸದೇ ಇದ್ದಲ್ಲಿ, ಅದರಿಂದ ಬರುವ ಆದಾಯವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಬಳಸದೇ ಇದ್ದಲ್ಲಿ, ಇಲಾಖೆಯು ಸದರಿ ಸಮುದಾಯ ಭವನ/ವಿದ್ಯಾರ್ಥಿ ನಿಲಯವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು.
11. ಈ ಪ್ರಮಾಣ ಪತ್ರದ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಕಾನೂನಿನ ರೀತ್ಯಾ ಕ್ರಮ ತೆಗೆದುಕೊಳ್ಳಬಹುದು.

ದಿನಾಂಕ: ಸಹಿ: ಸಹಿ:

ಹೆಸರು: ಹೆಸರು:

(ಸಂಸ್ಥೆಯ ಅಧ್ಯಕ್ಷರ) (ಸಂಸ್ಥೆಯ ಕಾರ್ಯದರ್ಶಿ)

(ಮೊಹರಿನೊಂದಿಗೆ) (ಮೊಹರಿನೊಂದಿಗೆ)

(ನೋಟರಿಯಿಂದ ಪ್ರಮಾಣೀಕರಿಸಿರಬೇಕು)

**ಚೆಕ್‌ಲಿಸ್ಟ್**

**ಹಿಂದುಳಿದ ವರ್ಗಗಳ ಸಂಘ/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಿರ್ಮಿಸುವ ವಸತಿ ನಿಲಯ / ಸಮುದಾಯ ಭವನ ಕಟ್ಟಡ ನಿರ್ಮಾಣದ ಬಗ್ಗೆ**

| | | |
|---|---|---|
| 1 | ಸಂಸ್ಥೆಯ ಹೆಸರು ಮತ್ತು ವಿಳಾಸ | |
| 2 | ಈ ಸಂಸ್ಥೆಯು ಹಿಂದುಳಿದ ವರ್ಗಗಳ ಯಾವ ಪ್ರವರ್ಗಕ್ಕೆ ಸೇರಿದೆ? | |
| 3 | ಈ ಸಂಸ್ಥೆಯು ನೊಂದಾಯಿಸಲ್ಪಟ್ಟಿದೆಯೇ ? ನೊಂದಣಿ ಸಂಖ್ಯೆ ಮತ್ತು ದಿನಾಂಕ | |
| 4 | ಟ್ರಸ್ಟ್‌ನ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರುವರೇ? | |
| 5 | ಸಂಸ್ಥೆಯು ನಿರ್ಮಿಸಲು ಉದ್ದೇಶಿಸಿರುವ ಕಟ್ಟಡ | |
| 6 | ಸಂಸ್ಥೆಯು ನಿರ್ಮಿಸಲು ಉದ್ದೇಶಿಸಿರುವ ವಿದ್ಯಾರ್ಥಿ ನಿಲಯ / ಸಮುದಾಯ ಭವನ ಕಟ್ಟಡಕ್ಕೆ ಸಂಸ್ಥೆಯ ಸ್ವಂತ ಜಮೀನು / ನಿವೇಶನ ಹೊಂದಿದೆಯೇ? | |
| 7 | ಸಮುದಾಯ ಭವನ ಕಟ್ಟಡ ನಿರ್ಮಿಸಲು ಉದ್ದೇಶಿಸಿರುವ ನಿವೇಶನವು ಇರುವ ಸ್ಥಳ | ಜಿಲ್ಲಾ ಕೇಂದ್ರ / ತಾಲ್ಲೂಕು ಕೇಂದ್ರ/ಪಟ್ಟಣ ಪಂಚಾಯಿತಿ / ಗ್ರಾಮ ಪಂಚಾಯಿತಿ |
| 8 | ಕಟ್ಟಡದ ನಕ್ಷೆಯು ನಗರಸಭೆ/ಪುರಸಭೆ /ಗ್ರಾಮಪಂಚಾಯತ್‌ನಿಂದ ಅನುಮೋದನೆ ಪಡೆದಿದೆಯೇ? | |
| 9 | ಕಟ್ಟಡ ನಿರ್ಮಾಣಕ್ಕೆ ಅಧಿಕೃತ ಪ್ರಾಧಿಕಾರದಿಂದ ಪರವಾನಗಿ ಪಡೆಯಲಾಗಿದೆಯೇ? | |
| 10 | ಕಟ್ಟಡದ ಅಂದಾಜು ವೆಚ್ಚ (ರೂ. ಲಕ್ಷಗಳಲ್ಲಿ) | |
| 11 | ಕಟ್ಟಡದ ಅಂದಾಜು ಪಟ್ಟಿಯು ಅಂಗೀಕೃತ ಅಭಿಯಂತರರಿಂದ ತಯಾರಿಸಲ್ಪಟ್ಟಿದೆಯೇ? | |
| 12 | ಸಂಸ್ಥೆಯು ಸರ್ಕಾರದಿಂದ ಕೋರಿರುವ ಅನುದಾನ (ರೂ. ಲಕ್ಷಗಳಲ್ಲಿ) | |
| 13 | ಸಂಸ್ಥೆಯ ಆರ್ಥಿಕ ಸ್ಥಿತಿಗತಿಗಳೇನು? | |
| 14 | ಕಟ್ಟಡದ ಕಾಮಗಾರಿ ಪ್ರಾರಂಭಿಸ ಲಾಗಿದೆಯೇ? ಹಾಗಿದ್ದರೆ ಪ್ರಸ್ತುತ ಹಂತ | |
| 15 | ಸಂಸ್ಥೆಯು ಈ ಕೆಳಕಂಡ ದಾಖಲೆಗಳನ್ನು ನೀಡಿದೆಯೇ? | |
| | 1) ಸಂಸ್ಥೆಯು ಹಿಂದುಳಿದ ವರ್ಗಗಳ ಯಾವ ಪ್ರವರ್ಗಕ್ಕೆ ಸೇರಿರುತ್ತದೆ ಎಂಬ ಬಗ್ಗೆ ದಾಖಲಾತಿ. | |
| | 2) ಜಿಲ್ಲಾ ನೋಂದಣಾಧಿಕಾರಿಗೆ ಹಿಂದಿನ ಸಾಲಿನವರೆಗೆ ಸಲ್ಲಿಸಿರುವ ಲೆಕ್ಕಪತ್ರದ ದೃಢೀಕರಣ ಪತ್ರ | |
| | 3) ಸಂಸ್ಥೆಯ ನೊಂದಣಿ ಪ್ರಮಾಣ ಪತ್ರ | |
| | 4) ಸಂಸ್ಥೆಯ ಬೈಲಾ ಪ್ರತಿ | |
| | 5)ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರ ಪಟ್ಟಿ ಮತ್ತು ವಿಳಾಸದ ಪಟ್ಟಿ | |
| | 6)ಸರ್ಕಾರದಿಂದ ಅನುದಾನ ಪಡೆಯುವ ಬಗ್ಗೆ ಸಂಸ್ಥೆಯ ನಡವಳಿ | |
| | 7)ಸಂಸ್ಥೆಯ ಹೆಸರಿನಲ್ಲಿ ನಿವೇಶನ ಅಥವಾ ಜಮೀನು ಹೊಂದಿರುವ ಬಗ್ಗೆ ಖಾತಾ ಪ್ರತಿ | |
| | 8)ಋಣಭಾರ ಪ್ರಮಾಣ ಪತ್ರ | |
| | 9) ಕಟ್ಟಡದ ನಕ್ಷೆ(ಮೂಲ ಪ್ರತಿ) ಮತ್ತು ಅಂದಾಜು ಪಟ್ಟಿ | |
| | 10)ಅರ್ಜಿ ಸಲ್ಲಿಸುವ ದಿನಾಂಕದ ಹಿಂದಿನ ಸಾಲಿನವರೆಗೆ ಕಂದಾಯ ಪಾವತಿಸಿರುವ ಬಗ್ಗೆ ರಶೀದಿ ಪ್ರತಿಗಳು | |
| | 11) ಅನುದಾನ ಪಡೆಯುವ ಬಗ್ಗೆ ಪ್ರಮಾಣ ಪತ್ರ | |
| | 12)ಗ್ರಾಮ ಪಂಚಾಯಿತಿ/ಪುರಸಭೆ/ ನಗರಸಭೆಯಿಂದ ಪಡೆದ ಅಧಿಕೃತ ಪರವಾನಗಿ | |
| | 13)ಸಂಸ್ಥೆಯ ನಿವೇಶನ ಖಾತಾ ಪ್ರತಿ | |
| | 14)ಅಂದಾಜು ಪಟ್ಟಿಯು ಅಧಿಕೃತ ಅಭಿಯಂತರಿಂದ ದೃಢೀಕರಿಸಿದ ಅಂದಾಜು ಪಟ್ಟಿಯ ಪ್ರತಿ | |
| | 15) ಸಮುದಾಯ ಭವನವನ್ನು ನಿಯಮಗಳಿಗೆ ಅನುಸಾರವಾಗಿ ಬಳಸುವ ಬಗ್ಗೆ ಸಂಸ್ಥೆಯ ಪ್ರಮಾಣ ಪತ್ರ ನೀಡಿದೆಯೇ? | |
| | 16)ಸಂಸ್ಥೆಯ ಆರ್ಥಿಕ ಪರಿಸ್ಥಿತಿ ಕುರಿತಂತೆ ಕಳೆದ 3 ವರ್ಷಗಳ ಲೆಕ್ಕಪತ್ರ/ಆಡಿಟ್ ವರದಿ (ಚಾರ್ಟೆಡ್ ಅಕೌಂಟೆಂಟ್ ದೃಢೀಕರಿಸಿರಬೇಕು) | |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| | | |
|---|---|---|
| | 17)ಕಟ್ಟಡ ನಿರ್ಮಾಣದ ಒಟ್ಟು ವೆಚ್ಚದಲ್ಲಿ ಸರ್ಕಾರದ ಅನುದಾನದ ಹೊರತು ಪಡಿಸಿ ಬಾಕಿ ಮೊತ್ತವನ್ನು ಭರಿಸುವ ಮೂಲಗಳ ವಿವರ | |
| 16 | ತನಿಖಾ ದಿನಾಂಕ<br>ತನಿಖಾಧಿಕಾರಿಗಳ ಷರಾ | |

ಜಿಲ್ಲಾ ಅಧಿಕಾರಿಗಳು
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ
. . . . . . . . . . . . . . ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಉಪ ಕಾರ್ಯದರ್ಶಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR.109**
**SC.500**

## ಕರ್ನಾಟಕ ಸರ್ಕಾರದ ಸಚಿವಾಲಯ

**ಸುತ್ತೋಲೆ ಸಂಖ್ಯೆ: 1/ವಿಎಸ್/ಎಸ್‌ಆರ್.ಎಸ್/ಬಿಎಲ್‌ಎಸ್/2014, ದಿನಾಂಕ: 30/01/2014.**

**ವಿಷಯ:** ಭಾರತದ ಜನಗಣತಿ 2011–ರಾಜ್ಯದಲ್ಲಿ ಮಾದರಿ ದಾಖಲಾತಿ ಪದ್ಧತಿಯನ್ನು ನೂತನವಾಗಿ ಅಯ್ಕೆ ಮಾಡಲಾಗಿರುವ ಘಟಕಗಳಲ್ಲಿ ಅನುಷ್ಠಾನಗೊಳಿಸುವ ಮತ್ತು ಅಂಶಕಾಲಿಕ ಗಣತಿದಾರರನ್ನು ನೇಮಕಗೊಳಿಸುವ ಬಗ್ಗೆ.

ನವದೆಹಲಿಯಲ್ಲಿರುವ ಭಾರತದ ರಿಜಿಸ್ಟ್ರಾರ್ ಜನರಲ್‌ರವರ ಕಛೇರಿಯ ರಾಷ್ಟ್ರೀಯ ಮಹತ್ವವುಳ್ಳ ಮಾದರಿ ದಾಖಲಾತಿ ಪದ್ಧತಿಯನ್ನು ರಾಷ್ಟ್ರದಾದ್ಯಂತ ಅನುಷ್ಠಾನಗೊಳಿಸುತ್ತಿದೆ. ಈ ಮಾದರಿ ದಾಖಲಾತಿ ಪದ್ಧತಿಯು ಗ್ರಾಮೀಣ ಪ್ರದೇಶಗಳಿಗೆ ನೈಸರ್ಗಿಕ ವಿಭಾಗ ಮಟ್ಟದಲ್ಲಿ ಮತ್ತು ನಗರ ಪ್ರದೇಶಗಳಿಗೆ ರಾಜ್ಯಮಟ್ಟದಲ್ಲಿ, ನಂಬಲರ್ಹವಾದ ವಾರ್ಷಿಕ ಜನನ, ಮರಣ ಮತ್ತು ಶಿಶು ಮರಣ ದರಗಳನ್ನು ಒದಗಿಸುವ ಏಕೈಕ ಮೂಲವಾಗಿದೆ. ಹೆಚ್ಚಿನ ಮಟ್ಟದ ಭೌಗೋಳಿಕ ಪ್ರದೇಶಗಳಿಗೆ ಸಂಪೂರ್ಣ ಸಂತಾನ ಫಲ, ಶಿಶು ಮತ್ತು ಮಕ್ಕಳ ಮರಣ ದರಗಳನ್ನೂ ಒಳಗೊಂಡಂತೆ ಸಂತಾನ ಫಲ ಮತ್ತು ಮರಣ ದರಗಳ ಇತರೆ ಮಾಪನಗಳ ಬಗೆಗಿನ ಮಾಹಿತಿಯನ್ನೂ ಸಹ ಒದಗಿಸುತ್ತದೆ.

ಭಾರತದಲ್ಲಿ ಮಾದರಿ ದಾಖಲಾತಿ ಪದ್ಧತಿಯು ಎರಡು ಬಗೆಯ ನೋಂದಣಿ ಕಾರ್ಯವಿಧಾನವನ್ನು ಆದರಿಸಿದೆ. ಮಾದರಿ ದಾಖಲಾತಿ ಪದ್ಧತಿಯ ಅಡಿಯಲ್ಲಿ, ಮಾದರಿ ಗ್ರಾಮಗಳ/ಪಟ್ಟಣಗಳಲ್ಲಿನ ಜನನಗಳ ಮತ್ತು ಮರಣಗಳ ಗಣತಿಯನ್ನು ನಿರಂತರವಾಗಿ ಕ್ಷೇತ್ರ ಪರಿಶೀಲನಾ ಕಾರ್ಯವಿಧಾನದ ಮುಖಾಂತರ, ಘಟಕಗಳಲ್ಲಿ ವಾಸಿಸುತ್ತಿರುವ ಒಬ್ಬ ಅಂಶಕಾಲಿಕ ಗಣತಿದಾರರಿಂದ ಕೈಗೊಳ್ಳಲಾಗುವುದು ಮತ್ತು ಪೂರ್ಣಕಾಲಿಕ ಮೇಲ್ವಿಚಾರಕರಿಂದ ಆರು ತಿಂಗಳಿಗೊಮ್ಮೆ ಪೂರ್ವಾನ್ವಯ ಸಮೀಕ್ಷೆಯನ್ನು ಸ್ವತಂತ್ರವಾಗಿ ಕೈಗೊಳ್ಳಲಾಗುವುದು. ಇತ್ತೀಚಿಗಿನ ಜನಗಣತಿಯ ಫಲಿತಾಂಶಗಳನ್ನು ಆದರಿಸಿ, ರಾಜ್ಯದ ಜನಸಂಖ್ಯೆಗೆ ಅಧಿಕ ಪ್ರಮಾಣದ ಪ್ರತಿನಿಧಿತ್ವವನ್ನು ನೀಡಲು, ಪದ್ಧತಿಯ ಕಾರ್ಯವಿಧಾನದಲ್ಲಿ ಅಗತ್ಯವಾದ ಬದಲಾವಣೆಗಳನ್ನು ಮಾಡಲು ಮತ್ತು ಹೆಚ್ಚುವರಿ ಬೇಡಿಕೆಗಳನ್ನು ಪೂರೈಸಲು, ಮಾದರಿ ದಾಖಲಾತಿ ಪದ್ಧತಿಯ ಘಟಕಗಳನ್ನು ಪ್ರತಿ ಹತ್ತು ವರ್ಷಗಳಿಗೊಮ್ಮೆ ಬದಲಾಯಿಸಲಾಗುವುದು. ಭಾರತದ ಜನಗಣತಿ 2011ರ ಫಲಿತಾಂಶಗಳನ್ನು ಆಧರಿಸಿ ಸದ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಘಟಕಗಳನ್ನು ಬದಲಾಯಿಸಲಾಗುತ್ತಿದೆ ಹಾಗೂ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳೆರಡರಲ್ಲಿಯೂ 2014ರ ಜನವರಿ 1ನೇ ತಾರೀಖಿನಿಂದ ಜಾರಿಗೆ ತರಲಾಗುತ್ತಿದೆ ಮತ್ತು ಮುಂಬರುವ ಹತ್ತು ವರ್ಷಗಳವರೆಗೂ ಜಾರಿಯಲ್ಲಿರುತ್ತದೆ. ಕರ್ನಾಟಕದಲ್ಲಿ ಮಾದರಿ ದಾಖಲಾತಿ ಪದ್ಧತಿಯನ್ನು ಜಾರಿಗೊಳಿಸಲು 361 ಗ್ರಾಮೀಣ ಮತ್ತು 150 ಪಟ್ಟಣ ಪ್ರದೇಶಗಳನ್ನೊಳಗೊಂಡಂತೆ ಹೊಸ ಮಾದರಿ ಘಟಕಗಳನ್ನು, ಜನಗಣತಿಯ ನಿರ್ದೇಶನಾಲಯವು ಅಯ್ಕೆ ಮಾಡಿದೆ.

ಮಾದರಿ ದಾಖಲಾತಿ ಪದ್ಧತಿ ಕ್ಷೇತ್ರ ಪ್ರಶ್ನಾವಳಿಯು ಕೆಲವು ವೈಯಕ್ತಿಕ ಮತ್ತು ಸೂಕ್ಷ್ಮತೆಯುಳ್ಳ ಪ್ರಶ್ನೆಗಳು ಕುಟುಂಬ ಕಲ್ಯಾಣ ಯೋಜನೆ ಅನುಸರಣೆಗಳು, ಇತ್ಯಾದಿಗಳನ್ನು ಹೊಂದಿರುವುದರಿಂದ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ, ಮಹಿಳಾ ಮತ್ತು ಮಕ್ಕಳ ಅಭಿವೃದ್ದಿ ಮತ್ತು ಶಿಕ್ಷಣ (ಪ್ರಾಥಮಿಕ ಮತ್ತು ಸೆಕೆಂಡರಿ) ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಮಹಿಳಾ ಸಿಬ್ಬಂದಿಗಳನ್ನು ಗ್ರಾಮ/ಪಟ್ಟಣ ಪ್ರದೇಶದಲ್ಲಿನ ಮಾದರಿ ಘಟಕದಲ್ಲಿ ಮೂಲ ಸಮೀಕ್ಷೆ ಹಾಗೂ ಜನನಗಳು ಮತ್ತು ಮರಣಗಳ ನಿರಂತರ ಗಣತಿಗಾಗಿ ಅಂಶಕಾಲಿಕ ಗಣತಿದಾರರನ್ನಾಗಿ ನೇಮಕ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ವಿಕೇಂದ್ರೀಕೃತ ಯೋಜನೆಗೆ ಮತ್ತು ರಾಜ್ಯ ಮತ್ತು ರಾಷ್ಟ್ರೀಯ ಮಾನವ ಅಭಿವೃದ್ಧಿ ಸೂಚಿಗಳಿಗೆ ಮಾದರಿ ದಾಖಲಾತಿ ಪದ್ಧತಿಯಿಂದ ಉತ್ಪನ್ನವಾಗುವ ಮಾಹಿತಿಯ ರಾಷ್ಟ್ರೀಯ ಮಹತ್ವ ಮತ್ತು ಉಪಯುಕ್ತತೆಯನ್ನು ಗಮನದಲ್ಲಿರಿಸಿಕೊಂಡು, ಕರ್ನಾಟಕದ ಜನಗಣತಿ ನಿರ್ದೇಶನಾಲಯವು ಕ್ಷೇತ್ರ ಮಟ್ಟದಲ್ಲಿ ಮಹಿಳಾ ಸಿಬ್ಬಂದಿಯನ್ನು ಅಂದರೆ, ತಮ್ಮ ಇಲಾಖೆಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತರು, ಆಶಾ ಕಾರ್ಯಕರ್ತರು, ಮಹಿಳಾ ಆರೋಗ್ಯ ಕಾರ್ಯಕರ್ತರು, ಮಹಿಳಾ ಆರೋಗ್ಯ ಭೇಟಿಗಾರರು, ಶಿಕ್ಷಕಿಯರು ಮತ್ತು ಇತರರನ್ನು ನೂತನವಾಗಿ ಆಯ್ಕೆ ಮಾಡಲಾಗಿರುವ ಮಾದರಿ ದಾಖಲಾತಿ ಪದ್ಧತಿಯ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳೆರಡಲ್ಲಿ ಅಂಶಕಾಲಿಕ ಗಣತಿದಾರರನ್ನಾಗಿ ನೇಮಕ ಮಾಡಲು ಅನುಮತಿ ನೀಡಲು, ಜಿಲ್ಲೆ/ತಾಲ್ಲೂಕು/ಪಟ್ಟಣ ಮಟ್ಟದಲ್ಲಿನ ತಮ್ಮ ಅಧೀನ ಅಧಿಕಾರಿಗಳಿಗೆ ಸೂಕ್ತ ಸೂಚನೆ/ಆದೇಶಗಳನ್ನು ನೀಡುವಂತೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ದಿ ಇಲಾಖೆ ಮತ್ತು ಪ್ರಾಥಮಿಕ ಮತ್ತು ಸೆಕೆಂಡರಿ ಶಿಕ್ಷಣ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳಿಗೆ ಸೂಚಿಸಲಾಗಿದೆ.

ರಾಜ್ಯದಲ್ಲಿ ನೂತನವಾಗಿ ಗುರುತಿಸಲಾಗಿರುವ ಪ್ರದೇಶಗಳಲ್ಲಿ ಮಾದರಿ ದಾಖಲಾತಿ ಪದ್ಧತಿಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ತಮ್ಮ ಅಧೀನದಲ್ಲಿನ ಕ್ಷೇತ್ರ ಮಟ್ಟದ ಸಿಬ್ಬಂದಿಗಳಿಗೆ ಸೂಕ್ತ ಸೂಚನೆಗಳನ್ನು ನೀಡಲು ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಮತ್ತು ಕಾರ್ಯದರ್ಶಿಗಳು (ನಗರಾಡಳಿತ), ನಗರಾಭಿವೃದ್ಧಿ ಇಲಾಖೆಗಳು ಇವರುಗಳಿಗೆ ಸೂಚಿಸಲಾಗಿದೆ ಮತ್ತು ಅಂಶಕಾಲಿಕ ಗಣತಿದಾರರನ್ನು ನೇಮಕ ಮಾಡಲು ಕರ್ನಾಟಕದ ಜನಗಣತಿ ನಿರ್ದೇಶನಾಲಯದ ಸಿಬ್ಬಂದಿಗೆ ಅಗತ್ಯವಾದ ನೆರವು ಮತ್ತು ಸಹಕಾರವನ್ನು ಒದಗಿಸಲು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ.

**ಕೌಶಿಕ್ ಮುಖರ್ಜಿ**
ಮುಖ್ಯ ಕಾರ್ಯದರ್ಶಿಗಳು
ಕರ್ನಾಟಕ ಸರ್ಕಾರ

**PR.202**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59